# ಬಸವಣ್ಣ
## 'ವಿವಾದಿತ ಕೃತಿಗಳು' ಒಂದು ಅಧ್ಯಯನ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ ಆಂಶಿಕ
ಆವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ


ಸಂಶೋಧಕ

ಮಂಜುನಾಥ ಸಿ.

ಮಾರ್ಗದರ್ಶಕರು

(ಡಾ. ಡಿ.ಜಿ. ರಮೇಶ್)
ಮುಖ್ಯಸ್ಥರು, ಕನ್ನಡ ವಿಭಾಗ,
ಎ.ಟಿ.ಎನ್.ಸಿ. ಕಾಲೇಜು,
ಶಿವಮೊಗ್ಗ.





ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ,
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.
ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೦೮

# ಬಸವಣ್ಣ
## 'ವಿವಾದಿತ ಕೃತಿಗಳು' ಒಂದು ಅಧ್ಯಯನ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ ಆಂಶಿಕ
ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ


ಸಂಶೋಧಕ

**ಮಂಜುನಾಥ ಸಿ.**

ಮಾರ್ಗದರ್ಶಕರು :

(ಡಾ. ಡಿ.ಜಿ. ರಮೇಶ್)
ಮುಖ್ಯಸ್ಥರು, ಕನ್ನಡ ವಿಭಾಗ,
ಎ.ಟಿ.ಎನ್.ಸಿ. ಕಾಲೇಜು,
ಶಿವಮೊಗ್ಗ.







ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ,
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ,
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
೨೦೦೮

# ಪ್ರಮಾಣ ಪತ್ರ

'ಬಸವಣ್ಣ ; ವಿವಾದಿತ ಕೃತಿಗಳು' ಒಂದು ಅಧ್ಯಯನ ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಸಲ್ಲಿಸಲು ಡಾ. ಡಿ.ಜಿ.ಶಮೇಶ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರೆ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 15/10/08

ಸ್ಥಳ : ಕುಪ್ಪಳಿ

ಸಿ. ಮಂಜುನಾಥ
( ಮಂಜುನಾಥ .ಸಿ. )
ಸಂಶೋಧನಾ ವಿದ್ಯಾರ್ಥಿ
ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ,
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ತೀರ್ಥಹಳ್ಳಿ ತಾ||, ಶಿವಮೊಗ್ಗ ಜಿಲ್ಲೆ.

## ದೃಢೀಕರಣ ಪತ್ರ

ಶ್ರೀ ಮಂಜುನಾಥ ಸಿ. ಇವರು 'ಬಸವಣ್ಣ ; ವಿವಾದಿತ ಕೃತಿಗಳು ಒಂದು ಅಧ್ಯಯನ ' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ : 15/10/2008

ಸ್ಥಳ : ಶಿವಮೊಗ್ಗ

[signature] /10/2008

(ಡಾ. ಡಿ.ಜಿ. ರಮೇಶ್)
ಮುಖ್ಯಸ್ಥರು, ಕನ್ನಡ ವಿಭಾಗ,
ಎ.ಟಿ.ಎನ್.ಸಿ. ಕಾಲೇಜು,
ಶಿವಮೊಗ್ಗ.



# ಬಸವಣ್ಣ : ವಿವಾದಿತ ಕೃತಿಗಳು ಒಂದು ಅಧ್ಯಯನ

## ಪರಿವಿಡಿ

# ಅಧ್ಯಾಯ-೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

★ ಪೀಠಿಕೆ

★ ಉದ್ದೇಶ

★ ವ್ಯಾಪ್ತಿ

★ ಸ್ವರೂಪ

**ಪೀಠಿಕೆ** :ಪ್ರಾಚೀನ ಕಾಲದಿಂದಲೂ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ನಡೆದ ವಿವಾದಿತ ನೆಲೆಗಳನ್ನು ಹಲವು ಅಧ್ಯಯನಗಳಿಂದ ಇಂದು ನಾವು ತಿಳಿದುಕೊಳ್ಳಬಹುದು. ಅವುಗಳಲ್ಲಿ ಮುಖ್ಯವಾಗಿ ಭಾಷೆಯನ್ನು ಬಳಸಿಕೊಂಡ ಸಂದರ್ಭದಲ್ಲಿ ಇರಬಹುದು ಅಥವಾ ಹೊಸ ರೀತಿಯ ವಸ್ತು, ಧೋರಣೆ, ವಿಷಯಗಳ ಬಳಕೆಯಲ್ಲಿರಬಹುದು ಹಾಗೂ ಲಕ್ಷಣ, ನಿರೂಪಣೆ ಹಾಗೂ ತಂತ್ರಗಳ ಸ್ವರೂಪಗಳಲ್ಲಿ ಇರಬಹುದು. ಒಟ್ಟಿನಲ್ಲಿ ಜಾತಿ ಕೇಂದ್ರಿತ, ವ್ಯಕ್ತಿ ಕೇಂದ್ರಿತ, ಸಮಾಜ ಕೇಂದ್ರಿತ ನೆಲೆಗಳಲ್ಲಿ ಆದ ವಿವಾದಿತ ಕ್ಷೇತ್ರಗಳನ್ನು ಇಲ್ಲಿ ತಿಳಿಯಬಹುದು. ಈ ಸಂದರ್ಭಗಳಲ್ಲಿ ಯಾವುದೋ ಒಂದು ಕಾಲಕ್ಕೆ , ಧರ್ಮಕ್ಕೆ ಅಥವಾ ಸಾಹಿತ್ಯ ಪ್ರಕಾರಕ್ಕೆ ಒಳಗಾಗಿ ರಚನೆಗೊಳ್ಳುತ್ತಿದ್ದ ಸಂದರ್ಭದಲ್ಲಿ ಇರಬಹುದು. ಇವು ಅವುಗಳಿಂದ ಬಿಡುಗಡೆಗೆ ಹವಣಿಸಿ ಹೊಸ ರೀತಿಯ ಸಂಶೋಧನೆ, ಅಧ್ಯಯನಗಳಲ್ಲಿ ತೊಡಗಿದಾಗ ಕೆಲವು ಹೊಸ ಸಂಗತಿಗಳು ಬೆಳಕಿಗೆ ಬರಲು ಪ್ರಾರಂಭವಾದವು. ಈ ಹೊಸ ವಿಚಾರಗಳು ಕೆಲವು ಜನರಲ್ಲಿ ಗೊಂದಲವನ್ನು ಸೃಷ್ಟಿಸಿ ಚರ್ಚೆ, ಸಂವಾದ, ಸಂಘರ್ಷಗಳಿಗೆ ದಾರಿ ಮಾಡಿಕೊಟ್ಟು ವಿವಾದಗಳನ್ನು ಸೃಷ್ಟಿಸಿದವು. ಈ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ನಡೆದ ಈ ವಿವಾದಿತ ನೆಲೆಗಳು ಕೇವಲ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗದೆ, ಜನಾಂಗೀಯ ದ್ವೇಷ, ಮತೀಯ ಗಲಭೆಗಳಿಗೂ ಕಾರಣವಾಗಿವೆ. ಅಷ್ಟೇ ಅಲ್ಲದೆ ರಾಜ್ಯ, ಸಂಸ್ಥಾನಗಳ ವಿಂಗಡಣೆ ಹಾಗೂ ವಿಸ್ತಾರಗಳಲ್ಲಿಯೂ ಮತ್ತು ವಿವಿಧ ಭಾಷಿಕರ ನಡುವಿನ ಸಾಮರಸ್ಯದಲ್ಲಿ ಆಗಿರುವ ವಿವಾದಿತ ನೆಲೆಗಳನ್ನೂ ಪಟ್ಟಿ ಮಾಡಬಹುದು. ಈ ಎಲ್ಲಾ ವಿವಾದಿತ ಸಾಹಿತ್ಯದ ನೆಲೆಗಳನ್ನು ಕುರಿತು ಮಹಾಪ್ರಬಂಧವನ್ನು ರಚಿಸುವಷ್ಟು ವಸ್ತು ಕನ್ನಡ ಸಾಹಿತ್ಯದಲ್ಲಿ ಇರುವುದನ್ನು ಗುರುತಿಸಿ ಅಧ್ಯಯನ ಮಾಡಬಹುದು.

ಈ ವಾದ -ವಿವಾದಗಳು, ಚರ್ಚೆಗಳು ಆಯಾ ಕಾಲದಲ್ಲಿ ಪ್ರಕಟಣೆಯಾದ ಕೃತಿಗಳಲ್ಲಿನ ವಿಷಯಗಳಿಗೆ ಸಂಬಂಧಿಸಿದಂತೆ ಆದಂತಹವುಗಳು. ಇವುಗಳನ್ನು ಕನ್ನಡ ಸಾಹಿತ್ಯದಲ್ಲಿ ಹೀಗೆ ಗುರುತಿಸಿ ಅಧ್ಯಯನ ಮಾಡಬೇಕಾಗುತ್ತದೆ.

೧. ಕಾಲ ಮತ್ತು ಭಾಷೆಯ ದೃಷ್ಟಿಯಿಂದ ; ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂದು ವಿಂಗಡಿಸಬಹುದು.

೨. ಕಾಲ ಮತ್ತು ಮತಗಳ ದೃಷ್ಟಿಯಿಂದ ; ಜೈನ, ಶೈವ, ವೈಷ್ಣವ ಸಾಹಿತ್ಯಗಳೆಂದು ವಿಂಗಡಿಸುವ ವಾಡಿಕೆಯಿದೆ.

೩. ಕಾಲ ಮತ್ತು ವ್ಯಕ್ತಿಗಳ ದೃಷ್ಟಿಯಿಂದ ; ಪಂಪ, ಬಸವಣ್ಣ , ಕುಮಾರವ್ಯಾಸ, ಕುವೆಂಪು ಎಂದು ವಿಂಗಡಿಸಬಹುದು.

೪. ಅಷ್ಟೇ ಅಲ್ಲದೆ ಛಂದಸ್ಸು ಮತ್ತು ಅಲಂಕಾರಗಳ ದೃಷ್ಟಿಯಿಂದ ; ಚಂಪು, ವಚನ, ದಾಸ ಸಾಹಿತ್ಯ ಹಾಗೂ ಆಧುನಿಕ ಕನ್ನಡ ಸಾಹಿತ್ಯವೆಂದು ಗುರುತಿಸಿ ಅಧ್ಯಯನ ಮಾಡಬಹುದು.

ಇವು ಹೀಗೆ ಒಂದೊಂದು ಕಾಲದಲ್ಲಿಯೂ ಒಂದೊಂದು ಸಾಹಿತ್ಯ ಕ್ಷೇತ್ರ, ಹೊಸದಾಗಿ ಪ್ರಾಶಸ್ತ್ಯಕ್ಕೆ ಬಂದಾಗ ಒಮ್ಮತವಿಲ್ಲದೆ ಒಪ್ಪಿಕೊಳ್ಳುವ ಮತ್ತು ಬಿಡುವ ಸಂದರ್ಭಗಳಲ್ಲಿ ವಿವಾದಗಳಾದವು. ಈ ವಾದ -ವಿವಾದಗಳಿಗೆ, ಚರ್ಚೆಗಳಿಗೆ ಹಾಗೂ ಘರ್ಷಣೆಗಳಿಗೆ ಒಳಗಾದ ಕೆಲವು ಕೃತಿಗಳು ಉತ್ತಮ ಕಥಾಸಾಹಿತ್ಯ, ಯಶಸ್ಸಿ ಪ್ರಯೋಗಗಳು ಎನಿಸಿಕೊಂಡವು. ಇನ್ನೂ ಕೆಲವು ಕೃತಿಗಳು ಬದಲಾವಣೆಯ ಹಂತಕ್ಕೆ ಒಳಪಟ್ಟವು. ಮತ್ತೆ ಕೆಲವು ಕೃತಿಗಳಲ್ಲಿನ ವಿಚಾರಗಳು ಕೃತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವಂತೆ ಮಾಡಿವೆ. ಅಂತಹವುಗಳಲ್ಲಿ ಮುಖ್ಯವಾಗಿ ವೀರಶೈವ ಧರ್ಮದ ಹಾಗೂ ಬಸವಣ್ಣನ ಜೀವನಕ್ಕೆ ಸಂಬಂಧಿಸಿದಂತೆ ಮುಟ್ಟುಗೋಲಾದ ಕೃತಿಗಳು ಪ್ರಮುಖವಾಗಿ ನಾಲ್ಕು. ಅವುಗಳನ್ನು ಈ ರೀತಿ ಗುರುತಿಸಬಹುದು. 'ವಚನ ದೀಪ್ತಿ ', 'ಮಹಾಚೈತ್ರ ', 'ಧರ್ಮಕಾರಣ' ಮತ್ತು 'ಆನುದೇವಾ ಹೊರಗಣವನು' ಈ ನಾಲ್ಕು ಕೃತಿಗಳಲ್ಲಿ ಬಸವಣ್ಣನ ಜೀವನವನ್ನು ಮತ್ತು ಅಕ್ಕ ನಾಗಮ್ಮನ ಜೀವನವನ್ನು ಕುರಿತು ವಿಶ್ಲೇಷಿಸಿ ಮುಟ್ಟುಗೋಲಾದ ಪ್ರಮುಖ ಕೃತಿಗಳು 'ಮಹಾಚೈತ್ರ', 'ಧರ್ಮಕಾರಣ ' ಮತ್ತು 'ಆನುದೇವಾ ಹೊರಗಣವನು ' ಈ ಮೂರು ಕೃತಿಗಳನ್ನು ಮಾತ್ರ ಈ ಪ್ರಬಂಧದಲ್ಲಿ ಅಧ್ಯಯನ ಮಾಡಲು ಉದ್ದೇಶಿಸಿದ್ದೇನೆ.

### ೧.೧ ಅಧ್ಯಯನದ ಅಗತ್ಯ :

ಈ ಸಂಪ್ರಬಂಧದಲ್ಲಿ ಬಸವಣ್ಣನ ಜೀವನವನ್ನು ಮತ್ತು ಅಕ್ಕ ನಾಗಮ್ಮನ ಜೀವನವನ್ನು ಕುರಿತ ಕೃತಿಗಳನ್ನು ಅಧ್ಯಯನ ನಡೆಸುವಾಗ ಇವುಗಳಿಗೆ ಸಂಬಂಧಪಟ್ಟ 'ವಚನದೀಪ್ತಿ', 'ಸಂಕ್ರಾಂತಿ', 'ತಲೆದಂಡ ' ಕೃತಿಗಳನ್ನಷ್ಟೇ ಅಲ್ಲದೇ, ಇತರ ಕೃತಿಗಳನ್ನೂ ಸಹ ಪ್ರಾಸಂಗಿಕವಾಗಿ ಅಧ್ಯಯನ ನಡೆಸಿದ್ದೇನೆ. ಜನರ ನಂಬಿಕೆ ಹಾಗೂ ಅಭಿರುಚಿಗಳನ್ನು ಬದಲಾಯಿಸಲು ಹೊರಟ ಈ ಕೃತಿಗಳ ಅಂಶಗಳನ್ನು ವಿವರವಾಗಿ ವಿಶ್ಲೇಷಿಸುವ ಪ್ರಯತ್ನವನ್ನು ನನ್ನ ಅಧ್ಯಯನ ಒಳಗೊಂಡಿದೆ.

ಯಾವುದೇ ಒಂದು ಧರ್ಮದ ಸಾಹಿತ್ಯದಲ್ಲಿ ಏನಾದರೂ ಶ್ರೇಷ್ಠತೆ ಇದ್ದರೆ ಅದಕ್ಕೆ ಕಾರಣ ಆ ಧರ್ಮದಲ್ಲಿನ ತತ್ವ , ನಿಯಮವಲ್ಲ, ಆ ಧರ್ಮದ ತತ್ವ, ನಿಯಮವನ್ನೂ

ಸಹಿಸಿಕೊಂಡು ಮೀರಿ ಬೆಳೆಯುತ್ತಿರುವ ವಿಶ್ವಮಾನವ ಧರ್ಮದ ತತ್ವ. ಈ ವಿಶ್ವಮಾನವ ಧರ್ಮದ ತತ್ವಕ್ಕೆ ವೀರಶೈವಧರ್ಮ ಸೇರ್ಪಡೆಯಾಗುತ್ತದೆ. ವೈಷ್ಣವ, ಜೈನ, ವೀರಶೈವ ಹೀಗೆ ಪ್ರತಿಯೊಂದೂ ಧರ್ಮದ ಸಾಹಿತ್ಯ ಪ್ರಕಾರಗಳು ತಮ್ಮ ಉಳಿವಿಗಾಗಿ ಒಂದರ ವಿರುದ್ಧ ಒಂದು ಪೈಪೋಟಿ ನೀಡುತ್ತಾ ಬಂದಿವೆ. ಅಂತಹವುಗಳನ್ನು ಇಲ್ಲಿ ಪ್ರಸ್ತಾಪಿಸಿ ಪ್ರಮುಖ ಕೃತಿಗಳ ಬಗ್ಗೆ ತೌಲನಿಕವಾಗಿ ಸಾಮಾಜಿಕ ನೆಲೆಯಲ್ಲಿ ವಿಶ್ಲೇಷಿಸುವುದು ನನ್ನ ಎಂ.ಫಿಲ್. ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಅಧ್ಯಯನದ ಕಾಲ ಮತ್ತು ಮಿತಿಯ ದೃಷ್ಟಿಯಿಂದ ಹಾಗೂ ಅಧ್ಯಯನದ ಉಪಯೋಗಕ್ಕಾಗಿ ಅಧ್ಯಯನದ ಸ್ವರೂಪವನ್ನು ಮತ್ತು ವ್ಯಾಪ್ತಿಯನ್ನು ಈ ಕೆಳಕಂಡಂತೆ ವಿಭಾಗಿಸಿಕೊಂಡಿದ್ದೇನೆ.

### ೧.೨ ಅಧ್ಯಯನದ ವ್ಯಾಪ್ತಿ :

ಬಸವಣ್ಣನವರನ್ನು ಕುರಿತು ಸೃಷ್ಟಿಯಾಗಿರುವ ಸೃಜನಾತ್ಮಕ ಸಾಹಿತ್ಯ ಕೃತಿಗಳು, ದಂತ ಕತೆಗಳು, ಪುರಾಣ ಕಥನ ಕಾವ್ಯಗಳು ಹಾಗೂ ಸಂಶೋಧನಾ ಪ್ರಬಂಧಗಳು ನೂರಾರು. ಆದರೂ ಸಹ ಬಸವಣ್ಣನ ಜೀವನ ಚರಿತ್ರೆಯು ನಮಗೆ ಇಂದಿಗೂ ಸಹ ಅಸ್ಪಷ್ಟವಾಗಿದೆ ಮತ್ತು ಅನಿರ್ದಿಷ್ಟವಾಗಿಯೇ ಉಳಿದಿದೆ. ಹೀಗಿದ್ದರೂ ಸಹ ಕೆಲವೊಂದು ಕೃತಿಗಳಲ್ಲಿ ಬಸವಣ್ಣ ಹಾಗೂ ಅಕ್ಕನಾಗಮ್ಮನ ಜೀವನವನ್ನು ವಿಭಿನ್ನವಾಗಿ ಚಿತ್ರಿಸಲಾಗಿದೆ. ಈ ರೀತಿ ಚಿತ್ರಿಸಿದ ಕೃತಿಗಳು ಸಂಪ್ರದಾಯವಾದಿಗಳ ಮತ್ತು ಮೂಲಭೂತವಾದಿಗಳ ಧೋರಣೆಗಳಿಗೆ ಸಿಲುಕಿ ನಿಷೇಧಗಳಿಗೆ ಒಳಪಟ್ಟಿವೆ. ಅಂತಹ ನಿಷೇಧಗಳಿಗೆ ಒಳಪಟ್ಟ ಕೃತಿಗಳನ್ನು ಅಧ್ಯಯನ ಮಾಡುವ ಅಗತ್ಯ ಪ್ರಸ್ತುತ ಸಂದರ್ಭದಲ್ಲಿ ಅವಶ್ಯಕವಾಗಿದೆ ಎಂದು ಪರಿಭಾವಿಸಿದ್ದೇನೆ.

ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸೃಜನಶೀಲ ಸಾಹಿತ್ಯ ಕೃತಿಗಳನ್ನು ರಚಿಸುವಲ್ಲಿ ಮುಂದಾದ ಲೇಖಕರು ಪುರಾಣ, ಚರಿತ್ರೆ, ಧರ್ಮ ಮತ್ತು ಚಾರಿತ್ರಿಕ ವ್ಯಕ್ತಿಗಳ ತತ್ವಗಳನ್ನೋ, ಘಟನೆಗಳನ್ನೋ ಅಥವಾ ಅವರ ಧೋರಣೆಗಳನ್ನೋ ಮುಖ್ಯವಾಗಿ ತೆಗೆದುಕೊಂಡು ಕೃತಿ ರಚಿಸುವ ಪರಿಪಾಠ ಬೆಳೆದುಬಂದಿದೆ. ಇದು ಕನ್ನಡ ಸಾಹಿತ್ಯದಲ್ಲಷ್ಟೇ ಅಲ್ಲದೆ, ಇತರ ಎಲ್ಲಾ ಭಾಷಾ ಸಾಹಿತ್ಯ ವಲಯದಲ್ಲಿಯೂ ಮತ್ತು ಬಹು ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿರುವುದನ್ನು ಗುರುತಿಸಬಹುದು. ಹೀಗೆ ಒಂದೊಂದು ಸಾಹಿತ್ಯ ಕೃತಿಗಳು ಒಂದೊಂದು ವಲಯಗಳಲ್ಲಿ ರಚನೆಯಾಗಿ ವಿವಾದಗಳನ್ನು ಸೃಷ್ಟಿಸಿವೆ. ಅಂತಹವುಗಳಲ್ಲಿ ಕೆಲವನ್ನು ಈ ಕೆಳಕಂಡಂತೆ ಉದಾಹರಣೆಗಾಗಿ ನೋಡಬಹುದು. ಸಲ್ಮಾನ್ ರಶ್ದಿ ಅವರ 'ಸಟಾನಿಕ್ ವರ್ಸಸ್ ', ತಸ್ಲೀಮಾನಸ್ರಿನ್ ಅವರ 'ಲಜ್ಜಾ ', ಕುವೆಂಪುರವರ 'ಕಾನೂರು ಹೆಗ್ಗಡತಿ ', 'ಮಲೆಗಳಲ್ಲಿ ಮದುಮಗಳು' , ಚದುರಂಗರ 'ವೈಶಾಖ ',

ಅನಂತಮೂರ್ತಿ ಅವರ 'ಸಂಸ್ಕಾರ ', ಲಂಕೇಶರ 'ಸಂಕ್ರಾಂತಿ ' , ಗಿರೀಶ್ ಕಾರ್ನಾಡರ 'ತಲೆದಂಡ ', ದೇವನೂರು ಮಹಾದೇವ ಅವರ 'ಕುಸುಮ ಬಾಲೆ ', ಭೈರಪ್ಪನವರ 'ಆವರಣ', 'ಬೋಳುವಾರು ಮಹಮದ್ ಕುಂಞ ಅವರ 'ಆಕಾಶಕ್ಕೆ ನೀಲಿ ಪರದೆ' ಇನ್ನೂ ಅನೇಕಾನೇಕ ಸಾಹಿತ್ಯ ಕೃತಿಗಳು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ, ಪ್ರಾದೇಶಿಕವಾಗಿ, ರಾಜಕೀಯವಾಗಿ, ಚಾರಿತ್ರಿಕವಾಗಿ ಮತ್ತು ಧಾರ್ಮಿಕವಾಗಿ ರಚನೆಯಾದ ಸಾಹಿತ್ಯ ಕೃತಿಗಳಾಗಿವೆ.

ಇವುಗಳಲ್ಲಿ ಮುಖ್ಯವಾಗಿ ೧೨ನೇ ಶತಮಾನದ ಕಲ್ಯಾಣ ಕ್ರಾಂತಿಯ ವಸ್ತುವನ್ನು ಮತ್ತು ಸಾಮಾಜಿಕ , ಧಾರ್ಮಿಕ ಪುರುಷನಾದ ಬಸವಣ್ಣನ ಜೀವನವನ್ನು ಹಾಗೂ ಚನ್ನಬಸವಣ್ಣನ ತಾಯಿಯಾದ ಅಕ್ಕನಾಗಮ್ಮನ ಜೀವನವನ್ನು ಕೇಂದ್ರವಾಗಿಟ್ಟುಕೊಂಡು ರಚನೆಯಾದಂತಹ ಕೃತಿಗಳು ಅನೇಕ. ಅವುಗಳಲ್ಲಿ ವಿವಾದಗಳನ್ನು ಸೃಷ್ಟಿಸಿದ ಕೃತಿಗಳು ಕೆಲವು ಮಾತ್ರ. ಅವುಗಳೆಂದರೆ, ಮಾತೆ ಮಹಾದೇವಿ ಅವರ -'ವಚನದೀಪ್ತಿ', ಲಂಕೇಶರ -'ಸಂಕ್ರಾಂತಿ', ಕಾರ್ನಾಡರ -'ತಲೆದಂಡ', ಹೆಚ್.ಎಸ್. ಶಿವಪ್ರಕಾಶ್ ಅವರ - 'ಮಹಾಚೈತ್ರ', ಪಿ.ವಿ.ನಾರಾಯಣ ಅವರ - 'ಧರ್ಮಕಾರಣ' ಹಾಗೂ ಬಂಜಗೆರೆ ಜಯಪ್ರಕಾಶ್ ಅವರ -'ಆನುದೇವಾ ಹೊರಗಣವನು' ಈ ಎಲ್ಲಾ ಕೃತಿಗಳಲ್ಲಿ ವೀರಶೈವ ಧರ್ಮವನ್ನು ಮತ್ತು ಬಸವಣ್ಣನ ಜೀವನ ಹಾಗೂ ಅಕ್ಕ ನಾಗಮ್ಮನ ಚಾರಿತ್ರ್ಯವನ್ನು ಕುರಿತು ಬರೆಯಲಾಗಿದೆ. ಆದರೆ, ಈ ಮೇಲಿನ ಎಲ್ಲಾ ಕೃತಿಗಳ ವಿಶ್ಲೇಷಣೆ ಮಾಡದೆ ''ಬಸವಣ್ಣ ; ವಿವಾದಿತ ಕೃತಿಗಳು ಒಂದು ಅಧ್ಯಯನ '' ಎಂಬ ಶೀರ್ಷಿಕೆಯಡಿಯಲ್ಲಿ

೧) ಹೆಚ್.ಎಸ್.ಶಿವಪ್ರಕಾಶ್- ಮಹಾಚೈತ್ರ(ನಾಟಕ ೧೯೯೪-೯೫)

೨) ಡಾ. ಪಿ.ವಿ.ನಾರಾಯಣ- ಧರ್ಮಕಾರಣ (ಕಾದಂಬರಿ ೧೯೯೬-೯೭)

೩) ಡಾ. ಬಂಜಗೆರೆ ಜಯಪ್ರಕಾಶ್ -ಆನುದೇವಾ ಹೊರಗಣವನು

(ಬಸವಣ್ಣನ ಜಾತಿ ಮೂಲ ವಿಶ್ಲೇಷಣೆ ಕುರಿತ ಪ್ರಬಂಧ ೨೦೦೭-೨೦೦೮)

ಈ ಮೂರೂ ಕೃತಿಗಳ ವಿಷಯಕ್ಕೆ ಮಾತ್ರ ಪ್ರಾಮುಖ್ಯತೆ ನೀಡಿ ನನ್ನ ಚರ್ಚೆಯನ್ನು ಸೀಮಿತಗೊಳಿಸಿದ್ದೇನೆ. ಅಷ್ಟೇ ಅಲ್ಲದೆ, ಉಳಿದ ಕೃತಿಗಳನ್ನೂ ಸಹ ಪ್ರಾಸಂಗಿಕವಾಗಿ ಗಮನಿಸಿದ್ದೇನೆ. ಹಾಗೆಯೇ ಈ ವಿವಾದಿತ ಕೃತಿಗಳಲ್ಲಿನ ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ವಿಚಾರಗಳ ಬಗೆಗೆ ಅಧ್ಯಯನ ಮಾಡಲಾಗಿದೆ. ಜೊತೆಗೆ ವಿವಾದಗಳಿಗೆ, ವಿರೋಧಗಳಿಗೆ ಮತ್ತು ನಿಷೇಧಗಳಿಗೆ ಕಾರಣವಾದ ಅಂಶಗಳನ್ನು ಪುನರ್ ಪರಿಶೀಲಿಸುವ ಹಾಗೂ ಪುನರ್ ನಿರೂಪಿಸುವ ಪ್ರಯತ್ನವನ್ನು ಇಲ್ಲಿ ಮಾಡಿದ್ದೇನೆ. ಈ ವಿವಾದಿತ ಕೃತಿಗಳಲ್ಲಿ ಅಭಿವ್ಯಕ್ತವಾಗಿರುವ ಸಾಮಾಜಿಕ, ಧಾರ್ಮಿಕ ವಿಚಾರಗಳು, ಶೋಷಣೆಯ ಪರಿ...

ಇತ್ಯಾದಿಗಳನ್ನು ಸಮಕಾಲೀನ ಸಂದರ್ಭಕ್ಕೆ ಮುಖಾಮುಖಿಯಾಗಿ ಇಟ್ಟು ನೋಡಲಾಗಿದೆ. ಹಾಗೆಯೇ ವಿವಿಧ ಕೃತಿಗಳಲ್ಲಿ ದಾಖಲಾಗಿರುವ ಅಂಶಗಳ ಸ್ವರೂಪವನ್ನೂ ಸಹ ಇಲ್ಲಿ ಗಮನಿಸಬಹುದು.

ಹೀಗೆ ವಿವಿಧ ಸಂಸ್ಕೃತಿಗಳು ಹಾಗೂ ವಿವಿಧ ಕಾಲಘಟ್ಟಗಳು ವಿಧಿಸುವ ನಿರ್ಬಂಧಗಳನ್ನು ಮತ್ತು ಲೇಖಕರು ಎದುರಿಸುವ ಅಭಿವ್ಯಕ್ತಿ ಸ್ವಾತಂತ್ರ್ಯದ ತೊಡಕುಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ. ೧೨ನೇ ಶತಮಾನದಲ್ಲಿ ಚಾರಿತ್ರಿಕ ವ್ಯಕ್ತಿಯಾಗಿ ಬಾಳಿ ಬದುಕಿದ್ದ ಬಸವಣ್ಣನ ಜೀವನವನ್ನು ನಾವು ಕಲಾಕೃತಿಯಲ್ಲಿ ಹೇಗೆಲ್ಲಾ ಚಿತ್ರಿಸಬಹುದೇ ? ಎಂಬ ಪ್ರಶ್ನೆಯು ಸಹ ಎದುರಾಗುತ್ತದೆ. ಅಭಿವ್ಯಕ್ತಿ ಸ್ವಾತಂತ್ರ್ಯ ಲೇಖಕನಿಗೆ ಒಂದು ಹಂತದವರೆಗೆ ಮಾತ್ರ ಇರುತ್ತದೆ. ಆ ಹಂತವನ್ನು ದಾಟಬಾರದು ಎಂಬುದು ಎಲ್ಲರ ಆಶಯ. ಅದರಂತೆಯೇ ಒಂದು ಕಲಾಕೃತಿಯಲ್ಲಿ ವಾಸ್ತವವೇ ಮುಖ್ಯವಲ್ಲ, ಅದರಾಚೆಗೂ ಕೆಲವೊಮ್ಮೆಮ್ಮೆ ದಾಟಬೇಕಾಗುತ್ತದೆ. ಆದರೆ, ಆ ದಾಟುವಿಕೆಯಲ್ಲಿಯೂ ಅಂಶಗಳು ಗಂಭೀರತೆಯಿಂದ ಕೂಡಿರಬಾರದು. ಲೇಖಕರಿಗೆ ಬರೆಯುವ ಅಭಿವ್ಯಕ್ತಿ ಸ್ವಾತಂತ್ರ್ಯ ಇದ್ದಂತೆಯೇ ಪ್ರಾಚೀನ ಕಾಲದಿಂದಲೂ ನಂಬಿಕೊಂಡು, ಆಚರಿಸಿಕೊಂಡು ಬಂದಿರುವ ವಿಚಾರಗಳನ್ನು ಬದಲಾಯಿಸಲು ಹೊರಟಾಗ ಅದನ್ನು ಒಪ್ಪಿಕೊಳ್ಳುವ ಅಥವಾ ವಿರೋಧಿಸುವ ಅಭಿವ್ಯಕ್ತಿ ಸ್ವಾತಂತ್ರ್ಯ ಸಮುದಾಯಕ್ಕೂ ಇರುತ್ತದೆ ಎಂಬುದನ್ನು ಎಲ್ಲರೂ ತಿಳಿಯಬೇಕಾಗಿದೆ.

**೧.೩ ಅಧ್ಯಯನದ ಸ್ವರೂಪ :**

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ. ಇಂದು ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಈ ವಿವಾದಿತ ಕೃತಿಗಳ ಮಹತ್ವವನ್ನು ತಿಳಿಸಲಾಗಿದೆ. ಈ ಅಧ್ಯಯನದಲ್ಲಿ ಬಳಸಿಕೊಂಡ ಮೂಲ ಆಕರಗಳನ್ನು ಶೋಧಿಸಲು ಹೊರಟ ಸನ್ನಿವೇಶದಲ್ಲಿ ಅವುಗಳಿಂದ ವ್ಯಕ್ತವಾದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ.

ಎರಡನೇಯ ಅಧ್ಯಾಯದಲ್ಲಿ ಈ ವಿವಾದಿತ ಕೃತಿಗಳ ರಚನೆಗೆ ಲೇಖಕರಿಗೆ ಪ್ರೇರಣೆ ನೀಡಿದ ಮತ್ತು ಕಾರಣವಾದ ಅಂಶಗಳನ್ನು ಹಾಗೂ ಸ್ವರೂಪಗಳನ್ನು ವಿಶ್ಲೇಷಿಸಿದ್ದೇನೆ. ಹಾಗೆಯೇ ಈ ಕೃತಿಗಳು ಪ್ರಕಟಣೆಯಾದ ಸಂದರ್ಭದಲ್ಲಿ ಜನಸಮುದಾಯದ ಮೇಲೆ ಬೀರಿದ ಪ್ರಭಾವ ಹಾಗೂ ಪರಿಣಾಮಗಳನ್ನು ಚರ್ಚಿಸಿದ್ದೇನೆ. ಮುಂದಿನ ಮೂರು, ನಾಲ್ಕು

ಮತ್ತು ಐದನೇಯ ಅಧ್ಯಾಯಗಳಲ್ಲಿ ಬಸವಣ್ಣನ ಜೀವನಕ್ಕೆ ಸಂಬಂಧಿಸಿದಂತೆ ವಿವಾದಗಳಾಗಿ ಸರ್ಕಾರದಿಂದ ರದ್ದಾದ ಈ ಮೂರು ಕೃತಿಗಳನ್ನು ಅಧ್ಯಯನಕ್ಕೆ ಒಳಗು ಮಾಡಿಕೊಂಡು ಈ ಕೆಳಕಂಡಂತೆ ವಿಶ್ಲೇಷಣೆ ಮಾಡಿದ್ದೇನೆ.

ಮೂರನೆಯ ಅಧ್ಯಾಯದಲ್ಲಿ 'ಮಹಾಚೈತ್ರ ' ನಾಟಕವನ್ನು ಕುರಿತು ಪ್ರಸ್ತಾಪಿಸಿದ್ದೇನೆ. ಈ ನಾಟಕವು ೧೯೮೬ ರಲ್ಲಿ ಪ್ರಕಟಣೆಯಾಗಿ ರಂಗಸಜ್ಜಿಕೆಯಲ್ಲಿ ಒಡಮೂಡಿದಾಗ ಸಾರ್ವಜನಿಕರ, ವಿದ್ವಾಂಸರ ಹಾಗೂ ಮಾಧ್ಯಮಗಳ ಪ್ರಶಂಸೆ, ಮೆಚ್ಚುಗೆಗೆ ಪಾತ್ರವಾಗಿತ್ತು ಎಂದು ತಿಳಿದುಬರುತ್ತದೆ. ರಾಷ್ಟ್ರೀಯ ನಾಟಕೋತ್ಸವದ ಮಟ್ಟಕ್ಕೂ ಏರಿದ ನಂತರ ೧೯೯೪-೯೫ ರ ಸಂದರ್ಭದಲ್ಲಿ ಉತ್ತರ ಕರ್ನಾಟಕದ ಕೆಲವು ವಿಶ್ವವಿದ್ಯಾಲಯಗಳಲ್ಲಿ ಈ ನಾಟಕ ಪಠ್ಯ ಪುಸ್ತಕವಾದಾಗ ಇದನ್ನು ಓದುವವರ ಸಂಖ್ಯೆ ಮತ್ತು ಮಾರಾಟದ ಸಂಖ್ಯೆ ಹೆಚ್ಚಾಗಿ ಲೇಖಕರು ಸಮಾಜದಲ್ಲಿ ಬೆಳಕಿಗೆ ಬಂದರು. ಹೀಗೆ ಬೆಳಕಿಗೆ ಬಂದ ಇವರ ಕೃತಿಯನ್ನು ಓದಿದ ಉತ್ತರ ಕರ್ನಾಟಕದ ಕೆಲವು ಮಠಾಧೀಶರು, ಬಸವಾನುಯಾಯಿಗಳು ಈ ಕೃತಿಯಲ್ಲಿ ಅನೇಕ ವಿಚಾರಗಳು ದೋಷದಿಂದ ಕೂಡಿವೆ ಎಂದು ವಾದಿಸಿ ವ್ಯಂಗ್ಯ, ಅಶ್ಲೀಲ ಎನ್ನುವ ಪದಪ್ರಯೋಗಗಳಿದ್ದು ಇತಿಹಾಸವನ್ನು ತಿರುಚಿದ್ದಾರೆ ಎಂಬ ವಿವಾದ ಎತ್ತಿದರು. ಈ ಮೂಲಕ ಬಸವಧರ್ಮದ ಬಗೆಗಿನ ಗೌರವಗಳನ್ನು ಕಡೆಗಣಿಸಿ ಜನರಲ್ಲಿ ತಪ್ಪು ಕಲ್ಪನೆ ಮೂಡಿಸುತ್ತಿದ್ದಾರೆ ಎಂದು ವಿರೋಧಿಸಿದ ಬಸವಾನುಯಾಯಿಗಳು ಈ ಕೃತಿಯ ವಿರುದ್ಧ ಪ್ರತಿಭಟಿಸಿ ಕೃತಿ ರದ್ದಾಗುವಂತೆ ಮಾಡಿದರು. ನಂತರ ಚರ್ಚೆ, ಸಂವಾದಗಳು ಮುಂದುವರಿದ ಕಾರಣ ಪಠ್ಯ ಪುಸ್ತಕವಾಗಿದ್ದ ಈ ಕೃತಿಯನ್ನು ವಿಶ್ವವಿದ್ಯಾಲಯಗಳಿಂದ ಕರ್ನಾಟಕ ಸರ್ಕಾರ ಕರ್ನಾಟಕದ ಮಟ್ಟಿಗೆ ಹಿಂಪಡೆದುಕೊಂಡಿತು. ಆದರೆ, ಸಂಪೂರ್ಣವಾಗಿ ಮುಟ್ಟುಗೋಲು ಹಾಕಿಕೊಂಡಿರಲಿಲ್ಲ. ಈ ರೀತಿಯ ನಿಷೇಧಕ್ಕೆ ಕಾರಣವಾದ ಈ ಕೃತಿಯ ಮುಖ್ಯ ಅಂಶಗಳನ್ನು ಹಾಗೂ ಕೃತಿಯ ಬಗ್ಗೆ ಎತ್ತಲಾದ ಪ್ರಶ್ನೆಗಳನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ಈ ಕೃತಿಯನ್ನು ಅಧ್ಯಯನದಲ್ಲಿ ದೀರ್ಘವಾಗಿ ವಿಶ್ಲೇಷಣೆಗೆ ಒಳಪಡಿಸಿಕೊಂಡು ಚರ್ಚಿಸಿದ್ದೇನೆ.

ನಾಲ್ಕನೆಯ ಅಧ್ಯಾಯದಲ್ಲಿ 'ಧರ್ಮಕಾರಣ ' ಕಾದಂಬರಿಯನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದೇನೆ. ಇದೂ ಸಹ ಬಸವಣ್ಣನ ಹಾಗೂ ಚೆನ್ನಬಸವಣ್ಣನ ಜೀವನವನ್ನು ಹಾಗೂ ಅಕ್ಕ ನಾಗಮ್ಮನ ಜೀವನವನ್ನು ಕುರಿತು ಪ್ರಸ್ತಾಪಿಸಿರುವ ಕಾದಂಬರಿ. ಇಲ್ಲಿನ ಕೆಲವು ಸಂದಿಗ್ಧ ಅಂಶಗಳು ಮತ್ತು ಹೇಳಿಕೆಗಳು ಮುಟ್ಟುಗೋಲಿಗೆ ಕಾರಣವಾದ ಅಂಶಗಳಾಗಿವೆ. ಈ ಅಧ್ಯಾಯದಲ್ಲಿ ಕಾದಂಬರಿಗೆ ಸಂಬಂಧಪಟ್ಟಂತೆ ವಿಮರ್ಶಾ ಲೇಖನಗಳ ಪರ ಹಾಗೂ ವಿರೋಧದ ಹಿನ್ನೆಲೆಯಲ್ಲಿ ಕೃತಿಯನ್ನು ಚರ್ಚಿಸಿ ಒಳಗು ಮಾಡಿಕೊಳ್ಳಲಾಗಿದೆ.

'ಅನುದೇವಾ ಹೊರಗಣವನು ' ಡಾ.ಬಂಜಗೆರೆ ಜಯಪ್ರಕಾಶ್‌ರವರು ಮಂಡಿಸಿದ 'ಬಸವಣ್ಣನ ಜಾತಿ ಮೂಲ ಕುರಿತ ವಿಶ್ಲೇಷಣೆ ' ಎಂಬ ಪ್ರಬಂಧವನ್ನು ಐದನೆಯ ಅಧ್ಯಾಯದಲ್ಲಿ ವಿಶ್ಲೇಷಿಣೆ ಮಾಡಲು ಉದ್ದೇಶಿಸಿದ್ದೇನೆ. ಕೊನೆಯ ಆರು ಮತ್ತು ಏಳನೆಯ ಅಧ್ಯಾಯಗಳಲ್ಲಿ ಕ್ರಮವಾಗಿ ಸಮರೋಪ ಮತ್ತು ಅನುಬಂಧಗಳನ್ನು ಪರಿಚಯಿಸಿದ್ದೇನೆ. ಸಮಾರೋಪದಲ್ಲಿ ಒಟ್ಟು ಪ್ರಬಂಧದ ತಾತ್ವಿಕತೆಯನ್ನು ಕಟ್ಟಿಕೊಡುವಲ್ಲಿ ಪ್ರಯತ್ನಿಸಿದ್ದೇನೆ. ಒಟ್ಟಾರೆಯಾಗಿ ನಾನು ಗ್ರಹಿಸಿದ ಹಾಗೂ ಮಂಡಿಸಿದ ವಿಚಾರಗಳ ಒಟ್ಟು ಸಾರಾಂಶವನ್ನು ಮತ್ತು ಇದುವರೆಗೂ ಆಗಿರುವ ಮತ್ತು ಮುಂದೆ ಇವುಗಳ ಬಗ್ಗೆ ಆಗಬೇಕಿರುವ ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ.

ಈ ವಿವಾದಿತ ಕೃತಿಗಳಿಗೆ ಸಂಬಂಧಪಟ್ಟಂತೆ ಸಾಹಿತ್ಯ ಮತ್ತು ಸಾಹಿತ್ಯೇತರ ಸಾಮಾಗ್ರಿಗಳನ್ನು ಹಾಗೂ ಈ ವಿವಾದಿತ ಕೃತಿಗಳ ಬಗ್ಗೆ ಬಂದಿರುವ ಪತ್ರಿಕಾ ಹೇಳಿಕೆಗಳನ್ನು, ಕರಪತ್ರಗಳನ್ನು ಹಾಗೂ ವಿಮರ್ಶಾ ಲೇಖನಗಳನ್ನು ಪರಾಮರ್ಶಿಸಿಕೊಂಡಿದ್ದೇನೆ. ಇವುಗಳಿಂದ ಉತ್ಪನ್ನವಾದ ವಿಚಾರಗಳನ್ನು ವ್ಯಾಪ್ತಿ ಮತ್ತು ಕಾಲದ ಮಿತಿಯ ಒಳಗಡೆ ಶೋಧಿಸಿಕೊಳ್ಳುವುದರ ಮೂಲಕ ಅಧ್ಯಯನ ನಡೆಸಿದ್ದೇನೆ. ಹಾಗೆಯೇ ಈ ಪ್ರಬಂಧಕ್ಕೆ ಬೇಕಾದ ಮೂಲ ಕೃತಿಗಳು ಕೆಲವು ಇದುವರೆಗೂ ಸಿಕ್ಕದೇ ಇರುವುದರಿಂದ ಈ ವಿವಾದಿತ ಕೃತಿಗಳ ಮೇಲೆ ಬಂದಿರುವ ವಾದ -ವಿವಾದಗಳನ್ನು ಮತ್ತು ವಿಮರ್ಶಾ ಲೇಖನ -ಕೃತಿಗಳನ್ನೇ ಮುಖ್ಯವಾಗಿ ಆಧರಿಸಿದ್ದೇನೆ.

---

## ಅಧ್ಯಾಯ - ೨

## ವಿವಾದಾತ್ಮಕ ಕೃತಿಗಳಿಗೆ ಪ್ರೇರಣೆ ಮತ್ತು ಅವುಗಳ ಪ್ರಭಾವಗಳು

**ಪೀಠಿಕೆ :** ೧೨ನೇ ಶತಮಾನದ ಶರಣರ ಇತಿಹಾಸವೇ ನಮಗಿಂದು ಪೂರ್ತಿಯಾಗಿ ಉಪಲಬ್ಧವಾಗದಿರುವಾಗ ಆ ಕಾಲದ ಬಗ್ಗೆ ನಿರ್ದಿಷ್ಟವಾಗಿ ಯಾರೂ ಸಹ ಹೇಳಿಕೆಯನ್ನು ನೀಡಿಲ್ಲ. ಇದರಿಂದ ಬಸವಣ್ಣನ ಜೀವನದ ಕಥೆಯು ಇನ್ನೂ ಸಂಶಯಗಳಲ್ಲಿಯೇ ಅಡಗಿದೆ. ಹೀಗಿದ್ದರೂ ಸಹ ಆ ಕಾಲದ ವಸ್ತುವನ್ನೋ ಅಥವಾ ವ್ಯಕ್ತಿಯನ್ನೋ ಕೇಂದ್ರವಾಗಿಟ್ಟುಕೊಂಡು ರಚನೆಯಾಗಿರುವ ಸಾಹಿತ್ಯ ಕೃತಿಗಳು ಅನೇಕ. ಅವೆಲ್ಲವೂ ಸಹ ವಿಚಾರವಂತರ ವ್ಯಕ್ತಿಗತವಾದ ಬುದ್ಧಿಶಕ್ತಿ , ಊಹೆ, ಕಲ್ಪನೆ, ನಂಬಿಕೆ ಹಾಗೂ ಆಚರಣೆಗಳಿಂದ ಕಂಡುಕೊಂಡ ಕಥೆಗಳಾಗಿವೆ ಎಂದು ತಿಳಿದುಬರುತ್ತದೆ. ನಾವು ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನದ ಆಕರಗಳಾಗಿ ಇಂತಹ ಕೃತಿಗಳನ್ನೇ ಅವಲಂಭಿಸಬೇಕಾದ ಅನಿವಾರ್ಯತೆ ಇದೆ. ಇವುಗಳಲ್ಲಿ ದಾಖಲಾಗಿರುವ ಅಂಶಗಳನ್ನೇ ಸತ್ಯವೆಂದು ಭಾವಿಸಿ, ಅಧ್ಯಯನ ಮಾಡುವ ಪರಿಸ್ಥಿತಿಯಲ್ಲಿದ್ದೇವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ೭೦-೮೦ರ ದಶಕದಿಂದ ಇಂದಿನವರೆಗೆ ಹಲವಾರು ಸಾಹಿತ್ಯ ಕೃತಿಗಳು ಬಸವಣ್ಣನನ್ನು ಕೇಂದ್ರವಾಗಿಟ್ಟುಕೊಂಡು ರಚಿತವಾಗಿವೆ. ಅವುಗಳಲ್ಲಿ ನಾಟಕ, ಕಾದಂಬರಿ, ಪ್ರಬಂಧಗಳು ಮತ್ತು ಕಾವ್ಯ ಪ್ರಕಾರಗಳು ಪ್ರಮುಖವಾದವುಗಳು. ಇವು ಅನೇಕ ಕಾರಣಗಳಿಗಾಗಿ ವಿವಾದಗಳಿಗೆ ಗುರಿಯಾಗಿವೆ. ಅವುಗಳಲ್ಲಿ ಕೆಲವು ಕೃತಿಗಳು ಕೋರ್ಟಿನ ಮೆಟ್ಟಿಲನ್ನೂ ಏರಿದ್ದಲ್ಲದೆ, ನಿಷೇಧಗಳಿಗೂ ಒಳಗಾಗಿವೆ. ಅಂತಹ ಕೃತಿಗಳಲ್ಲಿ ಪ್ರಮುಖವಾಗಿ ವೀರಶೈವ ಧರ್ಮದ ಬಸವಣ್ಣನನ್ನು ವ್ಯಕ್ತಿಕೇಂದ್ರಿತ, ಸಮಾಜಕೇಂದ್ರಿತ, ಜಾತಿಕೇಂದ್ರಿತವಾಗಿಟ್ಟುಕೊಂಡು ರಚನೆಯಾಗಿ ವಿವಾದಗಳನ್ನು ಸೃಷ್ಟಿಸಿವೆ. ಈ ರೀತಿಯ ವಿವಾದಗಳಾಗಿ ರದ್ದಾದ ಸಾಹಿತ್ಯ ಕೃತಿಗಳ ರಚನೆಗೆ ಕಾರಣವಾದ ಅಂಶಗಳನ್ನು , ಪ್ರೇರಣೆಗಳನ್ನು ಹಾಗೂ ಇವುಗಳಿಂದ ಸಮಾಜದಲ್ಲಿ ಉಂಟಾದ ಪರಿಣಾಮ, ಪ್ರಭಾವಗಳನ್ನು ಈ ಅಧ್ಯಯನದಲ್ಲಿ ವಿವರಿಸಲು ಪ್ರಯತ್ನಿಸಿದ್ದೇನೆ.

ಬಸವಣ್ಣನ ಹಾಗೂ ಕಲ್ಯಾಣ ಕ್ರಾಂತಿಯ ಪರಿಪೂರ್ಣತೆಯ, ಪರಿಕಲ್ಪನೆಯ ಕುರಿತ ನಾಟಕ , ಕಾದಂಬರಿ, ಪುರಾಣ, ಕಥೆ ಹಾಗೂ ಸಂಶೋಧನಾ ಪ್ರಬಂಧವಾಗಲಿ ಇದುವರೆಗೂ ಬಂದಿಲ್ಲ ಅಥವಾ ರಚನೆಯಾಗಿಲ್ಲ ಎಂದು ಹೇಳಬಹುದು. ಆದರೂ ಸಹ ಇಂದಿಗೂ ಪುರಾಣ, ದಂತಕಥೆ, ಶಾಸನಗಳು , ಜಾನಪದೀಯ ನಂಬಿಕೆ, ಆಚರಣೆಗಳ ಪರಂಪರೆಯನ್ನು ಅವಲಂಭಿಸಿ ಶಾಲಾ ಕಾಲೇಜುಗಳಲ್ಲಿ ಬೋಧಿಸಲು ಪಠ್ಯ ಪುಸ್ತಕಗಳಿಗೆ

ಎಷ್ಟು ಬೇಕೋ ಅಷ್ಟನ್ನು ಮಾತ್ರ ರಚಿಸಿಕೊಂಡಿದ್ದೇವೆ. ಹಾಗೂ ಶರಣರ ನೈಜ ಜೀವನದ ಕಥೆ ದೊರೆಯದೆ ವಚನ ಸಾಹಿತ್ಯ ಇನ್ನೂ ಕತ್ತಲಿನಲ್ಲಿಯೇ ಇದೆ. ಇದನ್ನು ಹಲವು ದೃಷ್ಟಿಕೋನಗಳಿಂದ ವೈಚಾರಿಕವಾಗಿ, ವೈಜ್ಞಾನಿಕವಾಗಿ, ತಂತ್ರಜ್ಞಾನಗಳ ಮೂಲಕ ಶಾಸನ ಸಾಹಿತ್ಯ ಕೃತಿಗಳನ್ನು ಮರುಪರಿಶೀಲಿಸಿ ಬೆಳಕಿಗೆ ತರಬೇಕಾಗಿದೆ.

ವಚನಕಾರರ ಬಗೆಗಿನ ಈ ವಿವಾದಿತ ಅಂಶಗಳು ನಾಡಿನ ಅನೇಕ ಪ್ರಗತಿಪರ ಚಿಂತಕರಿಗೆ, ಬಸವಧರ್ಮದ ಅನುಯಾಯಿಗಳಿಗೆ ಅಸ್ಪಷ್ಟವಾಗಿ ಗೊತ್ತಿರಲೂಬಹುದು. ಆದರೆ ಅವು ಒಂದು ಸೃಜನಶೀಲ ಕೃತಿಯಲ್ಲಿ ಮೈತಾಳಿದರೆ ಅದನ್ನು ಚರ್ಚಿಸುವ, ವಿಮರ್ಶಿಸುವ, ಟೀಕಿಸುವ, ವಿರೋಧಿಸುವ ರೀತಿ -ನೀತಿಗಳೇ ಬೇರೆ ಎಂಬುದಕ್ಕೆ ಈ ವಿವಾದಿತ ಕೃತಿಗಳು ಕಣ್ಮುಂದೆ ಸುಳಿಯುತ್ತವೆ.

ವಚನ ಚಳುವಳಿ ಮತ್ತು ಬಸವಣ್ಣನವರ ಜೀವನವನ್ನು ಕೇಂದ್ರವಾಗಿಟ್ಟುಕೊಂಡು ಸೃಜನಶೀಲ ಸಾಹಿತ್ಯ ಕೃತಿಗಳನ್ನು ರಚಿಸಿ, ವಿವಾದಗಳಿಗೆ ಒಳಗಾದ ಲೇಖಕರ ವಿಚಾರಗಳನ್ನು ಹಾಗೂ ಅವರ ಮನೋಧರ್ಮದ ಹಿನ್ನೆಲೆಯನ್ನು ರೇವಯ್ಯ ಒಡೆಯರ್ ಅವರು ಈ ಕೆಳಕಂಡಂತೆ ಮೂರು ಗುಂಪುಗಳಾಗಿ ವಿವರಿಸಿ ಹೇಳಿರುವುದನ್ನು ನೋಡಬಹುದು.

೧) ಮೂಲಭೂತವಾದಿಗಳು /ಕಟ್ಟಾ ಲಿಂಗಾಯಿತ ವರ್ಗ.

೨) ಉದಾರವಾದೀ ಲಿಂಗಾಯಿತ ವರ್ಗ.

೩) ಲಿಂಗಾಯಿತೇತರ ವರ್ಗ.

ಈ ನಿಟ್ಟಿನಲ್ಲಿ ಇದುವರೆಗೂ ವಿವಾದಗಳಾಗಿ ಮುಟ್ಟುಗೋಲಾದ ಕೃತಿಗಳನ್ನು ಈ ರೀತಿ ವಿಂಗಡಿಸಬಹುದೆಂದು ಸೂಚಿಸುತ್ತಾರೆ.

> ‘‘ ೧) ಮೂಲಭೂತವಾದಿಗಳು /ಕಟ್ಟಾ ಲಿಂಗಾಯಿತ ವರ್ಗ ಮೂಲಭೂತ ವಾದಿಗಳೆಂದು ಗುರುತಿಸಿಕೊಳ್ಳುವವರು ತಮ್ಮ ಮತದ ಮನೋಭೂಮಿಕೆಯಲ್ಲಿ ಹೊಸ ಬದಲಾವಣೆಯನ್ನು ಬಯಸಲಾರರು -ಬಳಸಲಾರರು. ಇವತ್ತಿನ ಚಳುವಳಿಕಾರರೆಂದು ಕಾಣುವ ವೀರಶೈವರು ಮತ್ತು ಮಾತೆ ಮಹಾದೇವಿ ಅವರು ಈ ಗುಂಪಿಗೆ ಸೇರುತ್ತಾರೆ. ಆದರೆ ಈ ಮಾತೆ ಮಹಾದೇವಿ ಅವರು ಸಹ ಇಂದು ಮೂಲ ವಚನಕಾರರ ವಚನಗಳ ಅಂಕಿತಗಳನ್ನು ತಿದ್ದಿ ಪ್ರಚಾರ ಪಡೆದಿದ್ದಾರೆ. ೨)ಉದಾರವಾದಿಗಳೆಂದು ಕಾಣುವ ವರ್ಗವು ತಾವು ನಂಬಿರುವ ಮತವನ್ನು , ಸಮಾಜವನ್ನು ಬದಲಾವಣೆಗೆ ಪ್ರಗತಿಯತ್ತ ಕೊಂಡೊಯ್ಯುವಲ್ಲಿ ಯತ್ನಿಸುತ್ತಾರೆ. ಇಲ್ಲಿ ಎಂ.ಎಂ.ಕಲ್ಬುರ್ಗಿ, ಹೆಚ್.ಎಸ್. ಶಿವಪ್ರಕಾಶ್ ಮತ್ತು ಪಿ. ಲಂಕೇಶ್ ಅವರನ್ನು ಗುರುತಿಸಬಹುದು. ಇವರ ಕೃತಿಗಳು ಅದನ್ನು

ಹೇಳುತ್ತವೆ. ೩) ಲಿಂಗಾಯಿತೇತರ ವರ್ಗ ತಮ್ಮ ಮತದಲ್ಲಿರುವ ವಿಶಿಷ್ಟತೆಗಳನ್ನು ನೆರೆಮನೆಯ ಮತದಲ್ಲಿ ಹುಡುಕಲು ತೊಡಗುತ್ತಾರೆ. ಇಲ್ಲಿ ಗಿರೀಶ್ ಕಾರ್ನಾಡ್, ಪಿ.ವಿ.ನಾರಾಯಣ್ ಲೇಖಕರನ್ನು ಗುರುತಿಸಬಹುದು ''★ಎಂದು ತಿಳಿಸಿದ್ದಾರೆ. ಬಂಜಗೆರೆ ಜಯಪ್ರಕಾಶ್ ಅವರು ಸಹ ಇಂದು ಈ ಗುಂಪಿಗೆ ಸೇರುತ್ತಾರೆ.

೧೨ನೇ ಶತಮಾನದಲ್ಲಿ ಬಸವಾದಿ ಶರಣರು ಸಮಾಜದಲ್ಲಿನ ವರ್ಣಸಂಕರವನ್ನು ತೊರೆಯುವಲ್ಲಿ ಅಥವಾ ಜಾತ್ಯಾತೀತ ಸಮಾಜವನ್ನು ಕಟ್ಟುವಲ್ಲಿ ಶ್ರಮಿಸಿದ ಶ್ರಮ ಸಾರ್ಥಕವಾಗಿದೆ. ಈ ಸಾರ್ಥಕ್ಯದ ಹಿನ್ನೆಲೆಯಲ್ಲಿ ಹೊಸ ಹೊಸ ನೋಟಗಳ ಆವಿಷ್ಕಾರವು ಸಾಹಿತ್ಯ ಕ್ಷೇತ್ರದಲ್ಲಿ ನಡೆಯುತ್ತಲೇ ಬಂದಿದೆ. ಮೊದಲಿಗೆ ಮಾತೆ ಮಹಾದೇವಿ ಅವರು ಬಸವಣ್ಣನವರ ವಚನಗಳ ಅಂಕಿತ ನಾಮವನ್ನು ಬದಲಿಸಿ ಪ್ರಚಾರಕ್ಕೆ ಬಂದಾಗ ಸಮಾಜದಲ್ಲಿ ಇವರ ಬೇಜವಾಬ್ದಾರಿತನವನ್ನು ಗುರುತಿಸಿದ ಬಸವಾನುಯಾಯಿಗಳೇ ಕೃತಿಯನ್ನು ವಿರೋಧಿಸಿ ನಿಷೇಧಿಸಿದರು. ನಂತರ ಎಂ.ಎಂ. ಕಲ್ಬುರ್ಗಿಯವರು 'ಮಾರ್ಗ' (ಸಂ.೧-೨) ಎಂಬ ಸಂಶೋಧನೆಯ ಕೃತಿಯಲ್ಲಿ ಸತ್ಯದ ಪ್ರಭುತ್ವವನ್ನು ಸಾರುವಲ್ಲಿ ಮುಂದಾದಾಗ ವಿವಾದಕ್ಕೆ ಒಳಗಾಗಿದ್ದಾರೆ. ಹೀಗೆ ಬಸವ ಧರ್ಮದವರ ಅಥವಾ ವೀರಶೈವರ ಕೋಪಕ್ಕೆ ಕೃತಿಗಳು ಮತ್ತು ಲೇಖಕರು ಪದೇ ಪದೇ ವಿವಾದಗಳಿಗೆ ಒಳಗಾಗುತ್ತಲೇ ಬಂದಿದ್ದಾರೆ. ಇದಕ್ಕೆ ಪ್ರಮುಖವಾದ ಕಾರಣಗಳೇನು ಎಂಬುದು ಇನ್ನೂ ತಿಳಿಯದಾಗಿದೆ.

ಇಂದು ಇತಿಹಾಸವನ್ನು ರಚಿಸಬಹುದು. ಆದರೆ ಸೃಷ್ಟಿಸಲಾಗುವುದಿಲ್ಲ. ಆದ್ದರಿಂದ ಸತ್ಯ ಎಂದಿಗೂ ಸತ್ಯವೇ ಆಗಿರುತ್ತದೆ. ಇದನ್ನು ಯಾವುದೇ ರೀತಿಯಲ್ಲಿ ಮುಚ್ಚಿಟ್ಟರೆ ಅಥವಾ ಮುಚ್ಚಿಡಲು ಪ್ರಯತ್ನಿಸಿದರೆ ಜನರಲ್ಲಿ ಕುತೂಹಲ ಇನ್ನೂ ಹೆಚ್ಚಾಗಿ ಪ್ರಚಾರ ಪಡೆಯುತ್ತದೆ. ಹೀಗೆ ಇವುಗಳ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ, ಅಧ್ಯಯನಗಳನ್ನು ನಡೆಸಲು ಪ್ರೇರಣೆ ದೊರೆಯುತ್ತದೆ. ಈ ರೀತಿ ಪ್ರಾರಂಭವಾದ ಅಧ್ಯಯನ ಕ್ಷೇತ್ರ ಕಾರ್ಯಗಳಿಂದ ಅನೇಕಾನೇಕ ಹೊಸ ಹೊಸ ವಿಚಾರಗಳು, ವಿಷಯಗಳು ಬೆಳಕಿಗೆ ಬರಲಾರಂಭಿಸಿವೆ. ಹೀಗೆ ಹೊಸದಾಗಿ ಬಂದ ವಿಚಾರಗಳನ್ನು ಸಂಪ್ರದಾಯವಾದಿಗಳು ನಿರಾಕರಿಸುತ್ತಲೇ ಬಂದಿದ್ದಾರೆ ಎಂಬುದಕ್ಕೆ ದಾಖಲೆಗಳು ಪುಷ್ಟೀಕರಿಸುತ್ತವೆ.

ಮಾತೆ ಮಹಾದೇವಿ ಅವರು ಮಾತ್ರ ಇಂದು ಅಭಿವ್ಯಕ್ತಿ ಸ್ವಾತಂತ್ರ್ಯದ ಹೆಸರಲ್ಲಿ ವಚನಗಳ ಅಂಕಿತನಾಮವನ್ನು ತಿರುಚಿದ್ದಾರೆ. ಹೀಗೆ ಶರಣರ ಇತಿಹಾಸವನ್ನು ತಿದ್ದುವ ಮತ್ತು ತಮ್ಮ ಇಚ್ಛೆಗೆ ಅನುಸಾರವಾಗಿ ಬಸವ ಧರ್ಮದವರ ವಚನಗಳನ್ನು ಬದಲಾಯಿಸಿಕೊಳ್ಳುವ ಹಕ್ಕು ಇದೆ ಎಂದು ಭಾವಿಸಿಕೊಂಡಿದ್ದಾರೆ. ಈ ಹಿಂದೆ ಪ್ರಚಾರಕ್ಕೆ

---

★ ರೇವಯ್ಯ ಒಡೆಯರ್ : ಪಿ.ವಿ. ನಾರಾಯಣರ 'ಧರ್ಮಕಾರಣ ' ಸಂಕ್ರಮಣ ಮಾಸಿಕ ಪತ್ರಿಕೆ, ಸಂಪುಟ : ೩೨, ಸಂಚಿಕೆ -೭, ಜುಲೈ ೧೯೯೭. ಪುಟ -೮೮.

ಬಂದಂತೆ ಮತ್ತೇ ಇಂದೂ ಸಹ ಅಕ್ಕಮಹಾದೇವಿ ಅವರ ವಚನಗಳ ಅಂಕಿತ ನಾಮವನ್ನು ತಿದ್ದಿ ಪ್ರಚಾರ ಕೈಗೊಂಡಿದ್ದಾರೆ. ಇವು ಹೀಗೆ ನಡೆದರೆ ಓದುಗ ವರ್ಗದ ಮೇಲೆ ದುಷ್ಪರಿಣಾಮಗಳು ಬೀರುತ್ತದೆ. ಆಗ ಸೃಜನಶೀಲ ಸಾಹಿತ್ಯ ಕೃತಿಗಳಿಗೆ ಬೆಲೆಯೇ ಇಲ್ಲದಂತಾಗಿಬಿಡುತ್ತದೆ.

ಈ ಕೃತಿಗಳಲ್ಲಿನ ವಾಸ್ತವಿಕತೆಯೆಂಬುದು ಸ್ವಯಂ ಪ್ರಜ್ಞೆಯುಳ್ಳ ಒಂದು ಸಾಹಿತ್ಯಕ ಚಳುವಳಿಯಾಗಿ ಪಾಶ್ಚಾತ್ಯರಲ್ಲಿ ಪ್ರಾರಂಭದಲ್ಲಿ ಕಾಣಿಸಿಕೊಂಡಿತ್ತಾದರೂ, ಅದು ಇಡೀ ಜಗತ್ತನ್ನೇ ಆವರಿಸಿತು. ಮುಖ್ಯವಾಗಿ ಸಾಧ್ಯವಾದಷ್ಟು ಪ್ರಾಮಾಣಿಕವಾಗಿ ಬದುಕಿನ ಮತ್ತು ಪ್ರಕೃತಿಯ ಎಲ್ಲಾ ಮುಖಗಳನ್ನು ಚಿತ್ರಿಸುವ ಹಾಗೂ ಪುನಃ ಸೃಷ್ಟಿಸುವ ಪ್ರಯತ್ನ ಇಲ್ಲಿ ನಡೆದಿದೆ. ಸತ್ಯದ ಆದರ್ಶೀಕರಣ, ಭಾಷೆಯ ಶೈಲೀಕರಣ, ಆಧ್ಯಾತ್ಮ ವಿಷಯಗಳ ತಿರಸ್ಕಾರಗಳು ವಾಸ್ತವತೆಯಲ್ಲಿ ಮಾನವೀಯ ಧೋರಣೆ ಇವುಗಳನ್ನು ಈ ಮೂರೂ ಕೃತಿಗಳಲ್ಲಿ ನೋಡಬಹುದು. ಈ ಕೃತಿಗಳಲ್ಲಿನ ವಿಶ್ಲೇಷಣೆಗಳು, ಹೇಳಿಕೆಗಳು ಮೂಲಭೂತವಾದಿಗಳಲ್ಲಷ್ಟೇ ಅಲ್ಲದೆ, ಸಾಮಾನ್ಯ ವರ್ಗದವರಲ್ಲಿಯೂ ದಿಗ್ಭ್ರಮೆ ಹುಟ್ಟಿಸಿವೆ. ಇವುಗಳಲ್ಲಿ ಕೆಲವು ಸಮಾಜನಿಷ್ಠವೂ, ಪ್ರಾಚೀನ ಪರಪಂರೆಯ ಸಾಕ್ಷೀಭೂತವೂ ಆಗಿವೆ. ಇಲ್ಲಿ ಸೌಂದರ್ಯದ ಕಲೆಗಾರಿಕೆಯನ್ನೂ ಮೀರಿ ಬದುಕಿನ ವೈಚಿತ್ರ್ಯಗಳನ್ನು ಬಗೆದಿಡುವ ತುರ್ತಿನ ರಾಜಕೀಯ ಬಿಕ್ಕಟ್ಟಿನ ಸವಾಲುಗಳನ್ನು ಎದುರಿಸುವ ಈ ಕೃತಿಗಳು ಸಾಮಾಜಿಕ, ಧಾರ್ಮಿಕ ವಿಶಿಷ್ಟತೆಯನ್ನು ತನ್ನ ಒಡಲಲ್ಲಿಟ್ಟುಕೊಂಡು ಬೆಳೆದಿವೆ /ಬೆಳೆಯುತ್ತಿವೆ. ೮೦-೯೦ರ ದಶಕದಲ್ಲಿ ಬಂಡಾಯ ಸಾಹಿತ್ಯ, ದಲಿತ ಸಾಹಿತ್ಯಗಳ ಹುಟ್ಟು ಬೆಳವಣಿಗೆಗಳು ತೀವ್ರವಾದಾಗ ಉತ್ತಮ ಸಾಹಿತ್ಯ ಕೃತಿಗಳು ರಚನೆಯಾಗಿ ಬೆಳಕಿಗೆ ಬರತೊಡಗಿದವು. ಈ ಕಾಲಘಟ್ಟದಲ್ಲಿ ನಡೆದ ಸಾಮಾಜಿಕ ಪ್ರಗತಿಯಿಂದ ಪ್ರೇರಣೆ ಪಡೆದುಕೊಂಡ ಹಲವಾರು ಸಾಹಿತಿಗಳು ದಲಿತರನ್ನೇ ಹಿನ್ನೆಲೆಯಾಗಿಟ್ಟುಕೊಂಡು ಕೃತಿಗಳನ್ನು ರಚಿಸಲು ಪ್ರಾರಂಭಿಸಿದ್ದೂ ಉಂಟು. ಈ ಸಂದರ್ಭದಲ್ಲಿ ಲಂಕೇಶ್, ಕಾರ್ನಾಡ್, ಕಂಬಾರ, ಸಿ.ಜಿ.ಕೆ. ... ಮುಂತಾದವರಿಂದ ಶಿವಪ್ರಕಾಶ್ ಅವರು ಸಹ ಪ್ರೇರಣೆ ಪಡೆದುಕೊಂಡು 'ಮಹಾಚೈತ್ರ ' ನಾಟಕವನ್ನು ರಚಿಸಿದರು ಎಂದು ಅವರ ಕೃತಿಯ ಅಧ್ಯಯನದಿಂದ ತಿಳಿಯುತ್ತದೆ.

''ಸಂಕ್ರಾಂತಿ '' ನಾಟಕವು ಪ್ರದರ್ಶನಕ್ಕೆ ಮುಂಚೆಯೇ ಅಲ್ಲಲ್ಲಿ (ಸಮಾಜದಲ್ಲಿ ) ಮಾತುಕತೆಗೆ ಒಳಗಾಗಿ ರಂಗಸಜ್ಜಿಕೆಯಲ್ಲಿ ಪ್ರಯೋಗಗೊಂಡಿತು'' ಎಂದು ಲಂಕೇಶರೇ ತಮ್ಮ ಕೃತಿಯಲ್ಲಿ ಹೇಳಿದ್ದಾರೆ. ಈ ನಾಟಕವು ಚಾರಿತ್ರಿಕ ವಸ್ತು, ವಿಷಯ ಮತ್ತು ಸಂಗತಿಗಳನ್ನು ಆಧರಿಸಿ ರಚನೆಯಾಗಿದೆ. ಇದು ನಾಡಿನಾದ್ಯಂತ ಹಲವು ಪ್ರದರ್ಶನಗಳನ್ನು ನೀಡಿ ಯಶಸ್ವಿ ಪ್ರಯೋಗಗೊಂಡು ಉತ್ತಮ ಸಾಹಿತ್ಯ ಕೃತಿಯೆಂದು ಕರೆಸಿಕೊಂಡಿದೆ. ಆ

ಕಾಲವು ನಾಟಕಗಳ ರಚನೆಗೆ ತುಂಬಾ ಮಹತ್ತರವಾಗಿತ್ತು ಎಂಬುದಕ್ಕೆ ಆಗ ರಚನೆಯಾದ ನಾಟಕ ಕೃತಿಗಳನ್ನು ನೋಡಿದರೆ ತಿಳಿಯುತ್ತದೆ. ಸಮಾಜದಲ್ಲಿನ ಜನಪರತೆ, ಮಾನವತಾವಾದ, ಸಹಿಷ್ಣುತೆಯನ್ನು ಮತ್ತಷ್ಟು ಎತ್ತರಿಸುವ ದರ್ಶನ ಈ ಶರಣರ ವಚನಗಳಲ್ಲಿದೆ. ಆದುದ್ದರಿಂದಲೇ ಬಸವಾದಿ ಶರಣರ ಸಾಹಿತ್ಯ ರಚನೆ ಇಂದಿಗೂ, ಸರ್ವಕಾಲಕ್ಕೂ, ಸರ್ವರಿಗೂ ಸಲ್ಲುವಂತಹವುಗಳಾಗಿರುವುದು.

'ತಲೆದಂಡ ' ನಾಟಕವನ್ನು ಕುರಿತು ಕಾರ್ನಾಡರು ''ತಲೆದಂಡ ಪದ ಬಸವಣ್ಣನವರ ವಚನದಿಂದ ಬಂದದ್ದಾದರೂ ನನಗೆ ನಾಟಕದ ಹೆಸರಾಗಿ ದೊರೆತದ್ದು ದ.ರಾ.ಬೇಂದ್ರೆ ಅವರಿಂದ ಸುಮಾರು ೫೦ ವರ್ಷಗಳ ( ಇಂದಿಗೆ ೭೦ ವರ್ಷಗಳ )ಹಿಂದೆ. ಅವರು ಬಸವಣ್ಣ - ಬಿಜ್ಜಳರ ಯುಗವನ್ನು ಕುರಿತು ಈ ಹೆಸರಿನ ನಾಟಕವನ್ನು ಬರೆಯುವ ಹೊಳಹು ಹಾಕಿದ್ದರಂತೆ ಆದರೆ, ಬರೆಯಲಿಲ್ಲ. ಈಗಾಗಲೇ ಈ ವಿಷಯವನ್ನೇ ವಸ್ತುವಾಗಿಟ್ಟುಕೊಂಡ ಹಲವಾರು ಕಾದಂಬರಿ, ನಾಟಕ, ಗದ್ಯಕೃತಿ, ಪ್ರಬಂಧಗಳು ಕನ್ನಡದಲ್ಲಿ ಬಂದಿವೆ. ಆದರೂ ಈ ನಾಟಕ ಬರೆದಿದ್ದೇನೆ. ಅದನ್ನು ಹೊಸ ಸಂದರ್ಭದಲ್ಲಿ ಅರ್ಥೈಸಲು ಯತ್ನಿಸುವುದು ಅನಿವಾರ್ಯವಾಗಿದೆ '' ಎಂದು ತಮ್ಮ ಅಭಿಪ್ರಾಯವನ್ನು 'ತಲೆದಂಡ ' ನಾಟಕದ ಕೃತಿಯ ರಚನೆಗೆ ಕಾರಣವಾದ ಅಂಶಗಳನ್ನು ಹೇಳಿಕೊಂಡಿದ್ದಾರೆ.

ಹೀಗೆ ಪ್ರೇರಣೆಗಳು ಮುಖ್ಯವಾಗಿ ಲೇಖಕರಿಗೆ ಆಯಾ ಕಾಲಘಟ್ಟ , ಸಮಾಜದಲ್ಲಿನ ಸ್ಥಿತಿಗತಿ, ಬುದ್ಧಿಶಕ್ತಿ , ಕಲ್ಪನೆ, ನಂಬಿಕೆ, ಆಚರಣೆಗಳಿಂದ ಹಾಗೂ ಸ್ಫೂರ್ತಿಯಿಂದ ಬಂದಂತಹವುಗಳು. ಇವು ಒಂದಕ್ಕೊಂದು ಸಾಮ್ಯವಿಲ್ಲದೆ ಬಸವಣ್ಣನ ಸಮಾಜವನ್ನು ನಿರ್ಲಕ್ಷ್ಯಿಸಿ ಒಬ್ಬೊಬ್ಬರು ಒಂದೊಂದು ರೀತಿ ತಮಗೆ ಸಿಕ್ಕಂತಹ ಆಧಾರರಹಿತ ಅಥವಾ ಸಹಿತ ಮಾಹಿತಿಗಳನ್ನು ಅವಲಂಭಿಸಿ ಬರೆದಂತಹವುಗಳೇ ಆಗಿವೆ. ಹೀಗೆ ಒಬ್ಬೊಬ್ಬರು ಒಂದೊಂದು ಕಥೆಗಳನ್ನು ಸೃಷ್ಟಿಸಿ ಬೇಕಾಬಿಟ್ಟಿ ಅನುಮಾನಿತ ಸತ್ಯಗಳೆಂದು ಬರೆಯುತ್ತಾ ಹೋದರೆ ಮುಂದೊಂದು ದಿನ ಬಸವಣ್ಣನ ಬಗ್ಗೆ ಸಮಾಜದಲ್ಲಿ ಕೀಳರಿಮೆ ಉಂಟಾಗುತ್ತದೆ. ಇದರಿಂದ ಆತನಿಗೆ ಸಲ್ಲಬೇಕಾದ ಯಾವುದೇ ರೀತಿಯ ಗೌರವಗಳೂ ಸಹ ಸಲ್ಲುವುದಿಲ್ಲ. ಆತನ ಚರಿತ್ರೆಯನ್ನು ಓದುವುದಿರಲಿ, ತಿಳಿದುಕೊಳ್ಳುವುದಕ್ಕೂ ಸಹ ಯಾರೂ ಮುಂದೆ ಬರದೆ ಹಿಂಜರಿಯುತ್ತಾರೆ ಎಂದು ಹೇಳಬಹುದು. ಆದ್ದರಿಂದ ಇನ್ನು ಮುಂದೆಯಾದರೂ ಬಸವಣ್ಣನ ನೈಜ ಇತಿಹಾಸವನ್ನು ಕಂಡು ಹಿಡಿಯುವಲ್ಲಿ ಮುಂದಾಗಿ ಈ ಅನುಮಾನಿತ ಸತ್ಯಗಳನ್ನು ಕೈಬಿಡಬೇಕು ಮತ್ತು ಜನರಲ್ಲಿ ಆತನ ಬಗ್ಗೆ ಒಲವು ಮೂಡಿಸಬೇಕು. ಇಂದು ಆತನ ಧರ್ಮದ ತತ್ವಗಳನ್ನು , ಸಾಹಿತ್ಯದಲ್ಲಿನ ತತ್ವಗಳನ್ನು ಸಮಾಜದಲ್ಲಿ ಪ್ರಚಾರ

ಮಾಡಬೇಕಿದೆ. ಹಾಗೆಯೇ ಬಸವಣ್ಣನನ್ನು ವಿಶ್ವಕ್ಕೇ ಪರಿಚಯಿಸಬೇಕಾದ ಈ ಸಂದರ್ಭದಲ್ಲಿ ಆತನ ಬಗ್ಗೆ ಈ ರೀತಿಯಲ್ಲಿ ವಿಶ್ಲೇಷಣೆ ಮಾಡಿ ಜನರಲ್ಲಿ ದ್ವಂದ್ವತೆಯನ್ನು ಸೃಷ್ಟಿಸಬಾರದು.

ಇಲ್ಲಿ ಸತ್ಯವನ್ನು ಹೊರಗೆಡಬೇಕಾದ ಸಂಶೋಧಕರೇ ಕೆಲವೊಂದು ಸತ್ಯಗಳನ್ನು ಮರೆಮಾಚಿರುವುದೂ ಸಹಾ ತಿಳಿಯುತ್ತದೆ. ಬಸವಣ್ಣನೊಬ್ಬ ದೈವ ಸಂಭೂತ, ಪೌರಾಣಿಕ ವ್ಯಕ್ತಿ, ಶಿವಸಂತಾನ, ಶಿವನ ಮತ್ತೊಂದು ರೂಪ.... ಇತ್ಯಾದಿಯಾಗಿ ಕಲಾತ್ಮಕವಾಗಿ ಚಿತ್ರಿಸಿ ಪ್ರಶಸ್ತಿ, ಬಹುಮಾನಗಳನ್ನು ಪಡೆದು ಸಮಾಜದವರ ಹೊಗಳಿಕೆಗೆ ಒಳಗಾದವರೇ ಹೆಚ್ಚು ಮಂದಿ ಇದ್ದಾರೆ. ಹಾಗೆಯೇ ಆತನ ಜೀವನವನ್ನು ಅನುಮಾನಾಸ್ಪದವಾಗಿ ರಚಿಸಿ ವಿವಾದಗಳಿಗೆ ಗುರಿಯಾದವರೂ ಸಹ ಇದ್ದಾರೆ.

ಇಂದು ಬಸವ ಧರ್ಮದವರು ಆತನ ತತ್ವಗಳನ್ನು ಪ್ರಚಾರ ಮಾಡದೆ ಆತನ ಜಾತಿ, ಕುಲ, ಗೋತ್ರವನ್ನು ಪ್ರಚಾರ ಮಾಡುವುದರ ಮೂಲಕ ಬ್ರಾಹ್ಮಣತ್ವವನ್ನು ಎತ್ತಿ ಹಿಡಿದಿದ್ದಾರೆ. ಬಸವಣ್ಣ ಬ್ರಾಹ್ಮಣ ವಿರೋಧಿ, ಅಸ್ಪೃಶ್ಯರ ಉದ್ಧಾರ, ಸಮಾಜ ಸುಧಾರಕ ಎಂದೆಲ್ಲಾ ಬಸವ ಧರ್ಮದವರೇ ಪ್ರಚಾರ ಮಾಡಿಕೊಂಡು ನಶಿಸಿ ಹೋಗಿರುವ ಅದೇ ಬ್ರಾಹ್ಮಣತ್ವವನ್ನು ಸಮಾಜದಲ್ಲಿ ಕಟ್ಟಿಕೊಳ್ಳುತ್ತಿದ್ದಾರೆ. ಬ್ರಾಹ್ಮಣತ್ವವನ್ನು ಬಸವಣ್ಣನ ಹೆಸರಿನಲ್ಲಿ ಪುನರ್ ಸ್ಥಾಪಿಸುವ ಕಾರ್ಯಗಳು ನಡೆದಿವೆಯೇ ಹೊರತು ಸತ್ಯಾನುಸತ್ಯತೆಗಳು ಇಂದಿಗೂ ಪ್ರಚಾರಕ್ಕೆ ಬಂದಿಲ್ಲ. ಅವುಗಳ ಬಗ್ಗೆ ಸಂಶೋಧನೆಗಳೂ ಸಹ ನಡೆದಂತೆ ಕಾಣುವುದಿಲ್ಲ. ಅದರಲ್ಲೂ ಕೆಲವು ಕೃತಿಗಳು ಸತ್ಯದ ದರ್ಶನ ಮಾಡಿಸಲು ಹೋಗಿ ನಿಷೇಧಗಳಿಗೆ ಒಳಗಾಗಿವೆ. ಇಂತಹ ಕೃತಿಗಳನ್ನು ಮತ್ತೆ ಪುನರ್ ಅಧ್ಯಯನ, ವಿಶ್ಲೇಷಣೆಗೆ ಒಳಪಡಿಸಿಕೊಂಡು ಅಧ್ಯಯನಗಳನ್ನು ನಡೆಸಬೇಕಿದೆ.

ಇತ್ತೀಚೆಗೆ ಕೆಲ ಕೃತಿಗಳ ಬಗ್ಗೆ ವಿವಾದ, ಪ್ರತಿಭಟನೆ, ಅವುಗಳೆಲ್ಲದರ ನಂತರ ಆ ಪುಸ್ತಕ ಮುಟ್ಟುಗೋಲು ಹಾಕಿಕೊಳ್ಳುವ ಪ್ರಸಂಗ ಹೆಚ್ಚಾಗುತ್ತಿದೆ. ಇದರಿಂದ ಭಾರೀ ಪ್ರಚಾರ ಪಡೆಯುವ ಕೃತಿಕಾರ ಬಹುಬೇಗ 'ದೊಡ್ಡ ವ್ಯಕ್ತಿಯಾಗಿ ' ಕಾಣಿಸಿಕೊಳ್ಳುತ್ತೇನೆ ಎನ್ನುವ ಹಂಬಲದಲ್ಲಿರುತ್ತಾನೆ. ಅಷ್ಟೇ ಅಲ್ಲದೆ ವಿವಾದಕ್ಕೆ ಎಡೆ ಮಾಡಿಕೊಟ್ಟ ಕೃತಿಯ ಮಾರಾಟ, ಪ್ರಚಾರ ದ್ವಿಗುಣವಾಗಿ ಲಾಭ ಪಡೆಯುತ್ತೇನೆ ಎನ್ನುವ ಹುನ್ನಾರವೂ ಸಹ ಇರುತ್ತದೆ. ಈ ಕೃತಿಗಳನ್ನು ಬಳಸಿಕೊಂಡು ವಿವಾದ ಎಬ್ಬಿಸಿರುವ ಮತ್ತು ಎಬ್ಬಿಸುತ್ತಿರುವವರ ಔಚಿತ್ಯವೇನು? ಎಂಬುದು ಸಹ ಅರ್ಥವಾಗದ ಸಂಗತಿಯಾಗಿದೆ.

ಬಸವಣ್ಣನ ಜಾತಿಯನ್ನು ಅನೇಕ ವಿದ್ವಾಂಸರು ಅನೇಕ ರೀತಿಯಲ್ಲಿ ಅರ್ಥೈಸಿ ವ್ಯಾಖ್ಯಾನಗಳನ್ನು ನೀಡಿದ್ದಾರೆ.ಅವರಲ್ಲಿ '' ಮಂಡಗೆಯ ಮಾದಿರಾಜ ಆ ಪಟ್ಟಣದ

ಮುಖ್ಯಸ್ಥನಾಗಿದ್ದ. ಅವನ ಹೆಂಡತಿ ಮಾದಾಂಬೆ. ಅವರು ಸಾಂಖ್ಯಾಯನ ಗೋತ್ರಕ್ಕೆ ಸೇರಿದ 'ಕಮ್ಮೆ' ಕುಟುಂಬದ ಶೈವಬ್ರಾಹ್ಮಣರಾಗಿದ್ದರು. ಬಹಳ ಕಾಲದ ಹಿಂದೆಯೇ ಆಂಧ್ರ ಪ್ರದೇಶದ ನೆಲ್ಲೂರು ಮತ್ತು ಗುಂಟೂರು ಪ್ರದೇಶಗಳಿಂದ ಆ ಕುಟುಂಬ ಕರ್ನಾಟಕಕ್ಕೆ ವಲಸೆ ಬಂದಿತೆಂದು 'ಕಮ್ಮೆ' ಎಂಬ ಪದವೇ ಸೂಚಿಸುತ್ತದೆ "★ ಎಂದು ಎಂ.ಚಿದಾನಂದಮೂರ್ತಿ ಅವರು ವಿವರಣೆ ನೀಡಿದ್ದಾರೆ. ಈ ವಿವಾದಿತ ಕೃತಿಗಳ ರಚನೆಗೆ ಹೀಗೆ ಒಬ್ಬೊಬ್ಬ ವಿದ್ವಾಂಸರು ಒಂದೊಂದು ರೀತಿ ನೀಡಿರುವ ಹೇಳಿಕೆಗಳೇ ದ್ವಂದ್ವತೆಗೆ ಪ್ರೇರಣೆ ಎನ್ನಬಹುದು.

'ಧರ್ಮಕಾರಣ' ಕಾದಂಬರಿಗೂ ಮತ್ತು 'ಮಹಾಚೈತ್ರ' ನಾಟಕಕ್ಕೂ ಇರುವ ಕಾಲದ ಅಂತರ, ಸಂದರ್ಭ, ಪರಿಸರ, ಜ್ಞಾನ ಅವೆಲ್ಲವೂ ಸಹ ಅಜಗಜಾಂತರ. ಆದರೂ ಸಹ 'ಧರ್ಮಕಾರಣ' ಕೃತಿ ಪ್ರಾರಂಭದಲ್ಲಿ ಮನ್ನಣೆ ಪಡೆದು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಆಯ್ಕೆಯಾಗಿತ್ತು. ಅನಂತರ ಕೆಲವು ರಾಜಕಾರಣಿಗಳ ಪ್ರಭಾವ, ಒತ್ತಡಗಳಿಗೆ ಒಳಗಾಗಿ ಅಂದಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾದ ಶಾಂತರಸರು ಪ್ರಶಸ್ತಿಯನ್ನು ಹಿಂಪಡೆದರು. ಈ ಕಾದಂಬರಿಯಲ್ಲಿ ಬಸವ ಯುಗದ ಚೆನ್ನಬಸವಣ್ಣನ ಹುಟ್ಟಿನ ಬಗೆಗೆ ಇರುವ ಕೆಲವು ಪುಟಗಳ ಭಾಗವು ವಿವಾದಕ್ಕೆ ಕಾರಣವಾದಾಗ ನ್ಯಾಯಾಲಯವು ಸಹ ಈ ಕೃತಿಯನ್ನು ನಿಷೇಧಿಸಿತು. ಆಗ ಸುಪ್ರೀಂ ಕೋರ್ಟ್ ಮೆಟ್ಟಿಲೇರಿದ ಲೇಖಕರ ತಂಡವೊಂದು ಅಲ್ಲಿ ದಾವೆಯನ್ನು ಹೂಡಿತ್ತಾದರೂ ಅಲ್ಲಿಯೂ ಸಹ ಸುಪ್ರೀಂ ಕೋರ್ಟ್ ಕೃತಿಯ ತಡೆಯಾಜ್ಞೆಯನ್ನು ಎತ್ತಿಹಿಡಿಯಿತು. ಇದರಿಂದ ಲೇಖಕರ ಅಭಿವ್ಯಕ್ತಿ ಸ್ವಾತಂತ್ರ್ಯವೆಂದರೇನು ? ಎಂಬ ಪ್ರಶ್ನೆ ಸಮಾಜದಲ್ಲಿ ಕೇಳಿಬಂದಿತ್ತು. ಇಲ್ಲಿ ಕೋರ್ಟು ಎತ್ತಿಹಿಡಿದಿರುವ ವಿಚಾರಗಳು ಅಂತಹ ದೊಡ್ಡ ವಿಚಾರಗಳೇನೂ ಅಲ್ಲ ಎಂದು ಅವರ ಕೃತಿಯ ಅಧ್ಯಯನದಿಂದ ತಿಳಿದುಬರುತ್ತದೆ.

ಬಂಜಗೆರೆ ಜಯಪ್ರಕಾಶ್ ಅವರಿಗೆ 'ಆನುದೇವಾ ಹೊರಗಣವನು' ಎಂಬ ಕೃತಿ ರಚಿಸಲು ಪ್ರಮುಖ ಕಾರಣ ಹಾಗೂ ಪ್ರೇರಣೆ ಅವರ ವಿದ್ಯಾರ್ಥಿಯೊಬ್ಬನು ಹೇಳಿದ ವಿಷಯ ಹಾಗೂ ವಡ್ಡಗೆರೆ ನಾಗರಾಜ್ ಅವರು ಬಾಲ್ಯದಲ್ಲಿನ ಕಥೆಯೊಂದನ್ನು ನೆನಪು ಮಾಡಿಕೊಂಡು ತಮಗೆ ಹೇಳಿದ್ದು ಎಂದು ಸ್ವತಃ ಲೇಖಕರೇ ಕೃತಿಯಲ್ಲಿ ಹೇಳಿದ್ದಾರೆ. ಈ ಕೃತಿಗಳ ರಚನೆಗೆ ಪ್ರೇರಣೆ, ಕಾರಣ ವ್ಯಕ್ತಿಗತವಾದದ್ದು ಆದರೂ ಸಹ ಸಮಾಜದ ಮೇಲೆ ಬೀರಿದ ಪರಿಣಾಮ, ಪ್ರಭಾವಗಳು ವಿಭಿನ್ನವಾಗಿವೆ. ಈ ರೀತಿಯ ಪ್ರಭಾವಗಳಿಗೆ ಸಮಾಜದಲ್ಲಿನ ಬೆಳವಣಿಗೆಗಳು ಮತ್ತು ಪರಿಸ್ಥಿತಿಗಳೇ ಕಾರಣ ಎಂದು ಹೇಳಬಹುದು.

---

★ ('ಬಸವಣ್ಣನವರು', ನ್ಯಾಷನಲ್ ಬುಕ್‌ಟ್ರಸ್ಟ್, ಇಂಡಿಯಾ ಹೊಸ ದೆಹಲಿ ೧೯೭೨, ಪುಟ : ೧೨)

'ಮಹಾಚೈತ್ರ' ನಾಟಕ ಕೃತಿ ಮತ್ತು 'ಧರ್ಮಕಾರಣ' ಕೃತಿಗಳು ಪ್ರಕಟಣೆಯಾದ ಹೊಸದರಲ್ಲಿ ಯಾವುದೇ ರೀತಿಯ ವಿವಾದಗಳನ್ನು ಸೃಷ್ಟಿಸಿರಲಿಲ್ಲ. ಅನಂತರ ಇವು ವಿವಾದಗಳಿಗೆ ಒಳಗಾದಾಗ ಸಮಾಜದಲ್ಲಿ ಮಾಡಿದ ಪ್ರಭಾವ ಅಷ್ಟಿಷ್ಟಲ್ಲ. ದೊಂಬಿಯೇ ನಡೆದು ರಸ್ತೆ ತಡೆ, ರೈಲು ತಡೆ, ಚರ್ಚೆ, ಸಂವಾದ, ಸಭೆ ಸಮಾರಂಭಗಳನ್ನು ಏರ್ಪಡಿಸಿ ಇವುಗಳ ಬಗ್ಗೆಯೇ ತೀರ್ಮಾನ ತೆಗೆದುಕೊಳ್ಳಲಾಯಿತು. ಮಹಾಚೈತ್ರದ ನಾಟಕದ ಪರವಾಗಿ ಮಹಿಳಾ ಸಂಘಟನೆಗಳು, ದಲಿತ ಸಂಘರ್ಷ ಸಮಿತಿಗಳು, ಬುದ್ಧಿಜೀವಿಗಳು, ಚಿಂತಕರು, ಲೇಖಕರು ನಿಂತರು. ಅದೇ ರೀತಿ ಮಠಗಳ ಅಧ್ಯಕ್ಷರುಗಳು, ಸಂಘ ಸಂಸ್ಥೆಗಳ ಅನುಯಾಯಿಗಳು, ಕೆಲವು ರಾಜಕಾರಣಿಗಳು ಈ ಕೃತಿಗಳ ಬಗೆಗೆ ವಿರೋಧವನ್ನು ವ್ಯಕ್ತಪಡಿಸಿದರು ಎಂಬುದನ್ನು ಗುರುತಿಸಬಹುದು. ಆದರೆ, ನಾಟಕಕಾರರಾದ ಶಿವಪ್ರಕಾಶ್‌ರವರು ಆ ಆಪಾದನೆಗಳಿಗೆಲ್ಲಾ ಸಾಕ್ಷ್ಯಾಧಾರ ಸಮೇತ ಉತ್ತರಿಸಿದರೂ ಸಹ ವಿವಾದಗಳಿಗೆ ಒಳಗಾಗಿತ್ತು. ಅದೇ ರೀತಿ 'ಧರ್ಮಕಾರಣ' ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವುದಾಗಿ ಲೇಖಕರಿಗೆ ತಿಳಿಸಿದಾಗ ಸ್ವತಃ ಲೇಖಕರೇ ತಮ್ಮ ಕೃತಿಗೆ ಲಭಿಸಿದ್ದ ಪ್ರಶಸ್ತಿಯನ್ನು ತಿರಸ್ಕರಿಸಿದರು. ಆಶ್ಚರ್ಯವೆಂದರೆ, ಇದೇ ಕೃತಿ ಕೇರಳ ರಾಜ್ಯದ ಮಲೆಯಾಳಂ ಭಾಷೆಯಲ್ಲಿ ಅನುವಾದಗೊಂಡಿದೆ. ಇನ್ನು ಹೆಚ್.ಎಸ್. ಶಿವಪ್ರಕಾಶ್‌ರವರ ನಾಟಕದ ವಸ್ತು ಕಲ್ಯಾಣ ಕ್ರಾಂತಿಯದೇ ಆದರೂ, ಅದರಲ್ಲಿ ಬಸವಣ್ಣನಿಲ್ಲ. ಇದು ಬಸವಣ್ಣನು ಕಲ್ಯಾಣ ನಗರವನ್ನು ತ್ಯಜಿಸಿದ ನಂತರದ ಕಥೆ. ಇಲ್ಲಿ ನಾಯಕನಿಲ್ಲ. ನಾಯಕನ ಬದಲಿಗೆ ನಾಯಕರಿದ್ದಾರೆ. ಅದರಲ್ಲೂ ಮುಖ್ಯವಾಗಿ ದಲಿತರು, ಅಸ್ಪೃಶ್ಯರು, ಸಮಾಜದ ತುಳಿತಕ್ಕೆ ಒಳಗಾದವರೇ ಇದ್ದಾರೆ. ಆದುದ್ದರಿಂದಲೇ ಈ ಕೃತಿಯನ್ನು ವೀರಶೈವ ಧರ್ಮದವರು ವಿರೋಧಿಸಿದರು ಎಂದು ತಿಳಿದುಬರುತ್ತದೆ. ಈ ''ನಾಟಕದ ವಿವಾದವನ್ನು ನೋಡಿದಾಗ ವಿವಾದವಿರುವುದು ಆ ನಾಟಕದ ಕೆಲವು ಶಬ್ಧಗಳಲ್ಲಿ ಅಲ್ಲ. ಅದನ್ನು ಅರ್ಥೈಸಿಕೊಂಡಿರುವುದಲ್ಲಿ ಎಂಬುದನ್ನು ತಿಳಿಯಬಹುದು'' ಎಂದು ಲೇಖಕ ಜಿ. ರಾಜಶೇಖರ್ 'ಮಹಾಚೈತ್ರ' (ನವಕರ್ನಾಟಕ ಪ್ರಕಾಶನ, ಬೆಂಗಳೂರು, ೬ನೇ ಮುದ್ರಣ) ಕೃತಿಯಲ್ಲಿ ಹೇಳಿದ್ದಾರೆ.

'ಮಹಾಚೈತ್ರ ', 'ಧರ್ಮಕಾರಣ ', ಮತ್ತು 'ಅನುದೇವಾ ಹೊರಗಣವನು' ಕೃತಿಗಳನ್ನು ಕುರಿತು ನಡೆದ ವಾದ-ವಿವಾದ, ಚರ್ಚೆ, ಸಭೆ-ಸಮಾರಂಭ, ಸಮರ್ಥನೆ, ದೂಷಣೆ, ಸೃಷ್ಟೀಕರಣ ಮುಂತಾದವುಗಳನ್ನೆಲ್ಲಾ ಇಂದು ವೈಚಾರಿಕ ನೆಲೆಯಲ್ಲಿ ಜರುಗಿಸಿದ್ದಂತೆಯೇ, ಅವುಗಳನ್ನು ಭಾವನಾತ್ಮಕ ವಿಷಯವನ್ನಾಗಿಸಿ, ಬೀದಿಗೆಳೆಯುವಲ್ಲಿ ಹಲವು ಶಕ್ತಿಗಳು ಯಶಸ್ವಿಯಾಗಿವೆ. ಈ ಕರ್ನಾಟಕ ರಾಜಕೀಯ ಅಸ್ಥಿರತೆಯ

ಅವಕಾಶದಲ್ಲಿ ಅಭಿಲಾಷಿಗಳ ಕೈವಾಡವೂ, ಸಮಯ ಸಾಧಕರ ಚೆಲ್ಲಾಟವೂ ಸೇರಿದೆ. ಗುಪ್ತ ಅಜೆಂಡಾವುಳ್ಳ ಕುಶಲಾಗ್ರ ಮೂಲಭೂತವಾದಿಗಳ ಪ್ರಚೋದನೆ ಇವೆಲ್ಲಾ ಸೇರಿ ರಂಪ ಎಬ್ಬಿಸಿ ಸರ್ಕಾರದ ಮೇಲೆ ಒತ್ತಡ ತಂದು ಈ ಪುಸ್ತಕಗಳನ್ನು ಮುಟ್ಟುಗೋಲು ಹಾಕುವಂತೆ ಮಾಡಿವೆ. ದುರಂತವೆಂದರೆ, ಬುದ್ಧಿಜೀವಿಗಳು ಹಾಗೂ ಸಾಹಿತ್ಯ ವಿಮರ್ಶೆ ನಿರ್ಧರಿಸಬೇಕಾದ ಪ್ರಶ್ನೆಯನ್ನು ನ್ಯಾಯಾಲಯ ನಿರ್ಧರಿಸಿರುವುದು ಅಷ್ಟು ಸುಲಭದ ಕೆಲಸವೇನೂ ಅಲ್ಲ. ಆದರೂ ಸಹ ನ್ಯಾಯಾಲಯ ತನಗೆ ದೊರಕಿದ 'ಚಾರಿತ್ರಿಕ ' ವೆಂದು ಹೇಳಲಾದ ಆಧಾರಗಳ ಮೇಲೆ ಈ ಕೃತಿಗಳ ರದ್ಧತಿಯನ್ನು ಎತ್ತಿಹಿಡಿದಿದೆ. 'ಆನುದೇವಾ ಹೊರಗಣವನು ' ಕೃತಿಯು ಉಳಿದ ಈ ಎರಡೂ ಕೃತಿಗಳಿಗಿಂತ ಹೆಚ್ಚಿನ ಪ್ರಭಾವವನ್ನು ಸಮಾಜದಲ್ಲಿ ಉಂಟು ಮಾಡಿತ್ತು ಎಂದು ಹೇಳಬಹುದು. ಪ್ರಾರಂಭದಲ್ಲಿ ಸರ್ಕಾರವು ಒಂದು ಹಂತದಲ್ಲಿ ಈ ಪುಸ್ತಕದ ಕುರಿತು ಸತ್ಯಶೋಧನ ಸಮಿತಿಯನ್ನು ನೇಮಕ ಮಾಡಿತ್ತಾದರೂ, ಅದರಿಂದ ಯಾವುದೇ ಪ್ರಯೋಜನವಾಗಲಿಲ್ಲ. ಈ ಸತ್ಯಶೋಧನ ಸಮಿತಿಯ ಅಧ್ಯಕ್ಷರಾಗಿ ಶ್ರೀಮತಿ ಗೀತಾ ನಾಗಭೂಷಣರು ಮತ್ತು ಶ್ರೀಯುತರುಗಳಾದ ಎಂ.ಎಂ.ಕಲ್ಬುರ್ಗಿ, ಮ.ನ. ಜವರಯ್ಯ, ಬರಗೂರು ರಾಮಚಂದ್ರಪ್ಪ, ಚಂದ್ರಶೇಖರ ಪಾಟೀಲರು ಸದಸ್ಯರಾಗಿದ್ದರು. ಈ ಸಮಿತಿಯ ಕಥೆಯೂ ಒಂದು ರೀತಿ ರೋಚಕವಾಗಿಯೇ ಇದೆ. ಸಮಿತಿಯ ಅಧ್ಯಕ್ಷರು ರಾಜೀನಾಮೆ ನೀಡಿ ಅನಾರೋಗ್ಯದ ಕಾರಣವೊಡ್ಡಿದರು. ಆದರೆ, ಇದರ ಹಿಂದೆ ಯಾವುದೋ ಒಂದು ಕಾಣದ ಕೈಯು ಬಲವಾದ ಕೆಲಸ ನಿರ್ವಹಿಸುತ್ತಿದೆ ಎಂದು ಎಲ್ಲೆಲ್ಲೂ ಸುದ್ದಿಗಳು ಕೇಳಿಬಂದವು. ಉಳಿದ ನಾಲ್ವರು ಸದಸ್ಯರು ಚರ್ಚೆ, ಸಂವಾದ ನಡೆಸುವಾಗ ಅವರ ಮೇಲೆ ಧಾಳಿ ಮಾಡಲಾಯಿತು. ಯಥಾಪ್ರಕಾರ ಜೆ.ಸಿ. ರಸ್ತೆಯಲ್ಲಿರುವ ಕನ್ನಡ ಭವನದ ಕಿಟಕಿಯ ಗಾಜುಗಳು ಪುಡಿಯಾಗಿ ಸದಸ್ಯರಿಗೆ ಗಾಯಗಳಾಗುವ ಸಂಭವವೂ ಬಂದಿತ್ತು ಎಂಬುದು ಮಾಧ್ಯಮಗಳಿಂದ ಪ್ರಕಟಣೆಯಾಗಿದ್ದನ್ನು ನೋಡಿದ್ದೇವೆ.

ಇನ್ನು ಚಾಮರಾಜಪೇಟೆಯ ಕನ್ನಡ ಸಾಹಿತ್ಯ ಪರಿಷತ್ತಿನ ಪರಿಷನ್ಮಂದಿರ ಸಭಾಂಗಣದಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಸಂವಾದ ಕಾರ್ಯಕ್ರಮವೊಂದು ನಡೆಯುತ್ತಿದ್ದಾಗ ನಾಡಿನ ಪ್ರಸಿದ್ಧ ಸ್ವಾಮೀಜಿಗಳೊಬ್ಬರು ರಾದ್ಧಾಂತ ಮಾಡಿ ಸಭೆಯ ಏಕತೆಗೆ ಭಂಗ ತಂದು ಸಭೆಯಿಂದ ಎಲ್ಲರನ್ನೂ ಹೊರದೂಡಿದ ಘಟನೆ ಎಲ್ಲರಿಗೂ ತಿಳಿದಿರುವಂತದ್ದೇ ಆಗಿದೆ. ಒಟ್ಟಿನಲ್ಲಿ ಈ ಸತ್ಯಶೋಧನಾ ಸಮಿತಿಯು ಗಂಭೀರವಾಗಿ ಕೃತಿಯ ಬಗ್ಗೆ ಅಭ್ಯಾಸ ನಡೆಸಿ ಒಮ್ಮತದ ವರದಿಯನ್ನು ಸಲ್ಲಿಸದೇ ತಮ್ಮ ತಮ್ಮ ಅಭಿಪ್ರಾಯವನ್ನು ಸರ್ಕಾರಕ್ಕೆ ಒಪ್ಪಿಸಿದರು. ಇವರಲ್ಲಿ ಇಬ್ಬರು ಸದಸ್ಯರು ಮಾತ್ರ ಪುಸ್ತಕವನ್ನು ಮುಟ್ಟುಗೋಲು ಹಾಕುವ ವಿಚಾರವನ್ನು ವಿರೋಧಿಸಿದರೆ, ಮತ್ತೆ ಉಳಿದಿಬ್ಬರು

ಮುಟ್ಟುಗೋಲಿಗೆ ಪ್ರಸ್ತಾವನೆಯನ್ನೇ ಒಮ್ಮತದಿಂದ ಮಾಡದೇ ಹೋದರು. ಇದರಿಂದ ಬೇಸತ್ತ ಸರ್ಕಾರವು ಪುಸ್ತಕವನ್ನು ಮುಟ್ಟುಗೋಲು ಹಾಕುವ ಆಜ್ಞೆಯನ್ನು ಹೊರಡಿಸಿತು. ಸ್ವತಃ ಸ್ವಯಂಪೂರ್ಣವಾಗಿ ಖುದ್ದಾಗಿ ಕೃತಿಯನ್ನು ಹಿಂಪಡೆಯುವ ಮೂಲಕ ಸಮಾಜದಲ್ಲಿನ ವಿಷಮ ವಾತಾವರಣಕ್ಕೆ ಶಾಂತಿಯನ್ನು ತಂದುಕೊಡುವಂತೆ ಲೇಖಕರಿಗೆ ಮನವಿ ಮಾಡಲಾಯಿತು. ಆದರೆ ಲೇಖಕರು ಈ ಎಲ್ಲಾ ಘಟನೆಗಳನ್ನು ಗಮನಿಸಿಯೂ ಸುಮ್ಮನಿದ್ದಾಗ ಕಾನೂನಿನ ಅನ್ವಯದಂತೆ 'ಆನುದೇವಾ' ಕೃತಿಯನ್ನು ಮುಟ್ಟುಗೋಲು ಹಾಕಿಕೊಂಡು ಮುಂದಿನ ಪ್ರಕಟಣೆಗಳನ್ನು ಸಹ ನಿಷೇಧಿಸಿದೆ.

ಇದೇ ರೀತಿ 'ಧರ್ಮಕಾರಣ' ಕೃತಿಯೂ ಸಹ ಸಾಹಿತ್ಯೇತರ ಕಾರಣಕ್ಕಾಗಿ ಭಾರೀ ವಿವಾದವೆದ್ದಾಗ ಬಹುಮಾನವನ್ನು ಲೇಖಕರೇ ತಿರಸ್ಕರಿಸಿದರು. ಅಲ್ಲದೆ, ವಿವಾದ ಮುಂದುವರಿದು ಪಟ್ಟಭದ್ರರ ಒತ್ತಡಕ್ಕೆ ಮಣಿದ ಕರ್ನಾಟಕ ಸರ್ಕಾರ ಅದನ್ನು ಮುಟ್ಟುಗೋಲು ಹಾಕಿಕೊಳ್ಳುವ ಆಜ್ಞೆಯನ್ನು ಜಾರಿ ಮಾಡಿತು. ಈ ತೀರ್ಮಾನದ ವಿರುದ್ಧ ಕೆಲವು ಮಂದಿ ಕನ್ನಡ ಲೇಖಕರು ಮತ್ತು ಕೊನೆಯ ಅಪೀಲುದಾರನಾಗಿ ಕಾದಂಬರಿಯ ಲೇಖಕರೂ ಆದ ಪಿ.ವಿ.ನಾರಾಯಣ್ ಅವರು ಸುಪ್ರೀಂಕೋರ್ಟ್‌ನಲ್ಲಿ ದಾವೆ ಹೂಡಿದರು. ಕೆಲವರು ಆಕ್ಷೇಪ ಮಾಡಿದ ಭಾಗಗಳನ್ನು ಕೈಬಿಟ್ಟರೆ ಮುಟ್ಟುಗೋಲು ಆಜ್ಞೆಯನ್ನು ವಾಪಾಸು ಪಡೆಯುವುದಾಗಿ ಸರ್ಕಾರ ಹೇಳಿ ಕೋರ್ಟ್ ಲೇಖಕನ ಅಭಿಪ್ರಾಯ ಕೇಳಿತು. ಆದರೆ ಲೇಖಕ ಇದಕ್ಕೆ ಒಪ್ಪಲಿಲ್ಲವಾಗಿ, ಕೊನೆಗೆ ಕೋರ್ಟ್, ''ಕಾದಂಬರಿಯು ಕೆಲವರ ಮನಸ್ಸಿಗೆ ನೋವುಂಟು ಮಾಡಿರುವುದರಿಂದ ಅದನ್ನು ಲೇಖಕನು ದುರುದ್ದೇಶದಿಂದ ರಚಿಸಿದನೆಂಬ ತೀರ್ಮಾನಕ್ಕೆ ಬರಬೇಕಾಗಿದೆ '' ಎಂದು ಹೇಳಿ ಸರ್ಕಾರದ ಮುಟ್ಟುಗೋಲು ಆಜ್ಞೆಯನ್ನು ಎತ್ತಿಹಿಡಿಯಿತು. ಹೈಕೋರ್ಟ್‌ನಲ್ಲಿ ದಾವೆ ಹೂಡಿದ್ದ ಲೇಖಕರಲ್ಲಿ ಬಹುಮಂದಿ ಹಾಗೂ ಲೇಖಕ ಹೈಕೋರ್ಟ್ ತೀರ್ಪಿನ ವಿರುದ್ಧ ಭಾರತದ ಸುಪ್ರೀಂ ಕೋರ್ಟ್‌ನಲ್ಲಿ ಅಪೀಲು ಮಾಡಿದ್ದರು. ಆದರೂ ಅದೂ ಅಲ್ಪ ಸಂಖ್ಯಾತರ ಧಾರ್ಮಿಕ ಮನೋಭಾವಕ್ಕೆ ಧಕ್ಕೆ ತರುವ ಕಾರಣ ಕರ್ನಾಟಕ ಸರ್ಕಾರವು 'ಧರ್ಮಕಾರಣ ' ಕೃತಿಗೆ ನಿಷೇಧ ಹೇರುವ ಮೂಲಕ ೧೯೯೭ ನೇ ಇಸವಿಯ ಆಜ್ಞೆಯನ್ನು ಎತ್ತಿಹಿಡಿಯಿತು.

ಈ ಮೂರೂ ಕೃತಿಗಳು ಹುಟ್ಟುಹಾಕಿದ ಈ ಎಲ್ಲಾ ವಿವಾದ, ಚರ್ಚೆ, ಸಂವಾದಗಳ ಹಿಂದೆ ಗಂಭೀರವಾದ ರಾಜಕಾರಣದ ಪ್ರಭಾವ ಇರುವುದನ್ನು ನಾವು ತಿಳಿಯಬಹುದು. ಅಷ್ಟೇ ಅಲ್ಲದೆ ಈ ಕೃತಿಗಳೆಲ್ಲವನ್ನು ಹೆಚ್ಚಿನ ಮಟ್ಟಿಗೆ ವಿರೋಧಿಸಿದವರು ಒಂದು ನಿರ್ದಿಷ್ಟ ಸಮುದಾಯಕ್ಕೆ ಸೇರಿದವರು ಹಾಗೂ ಕೆಲವು ಸಂಘ ಸಂಸ್ಥೆಗಳ ಅನುಯಾಯಿಗಳಾಗಿದ್ದಾರೆ.

ಆದರೆ, 'ಅನುದೇವಾ ಹೊರಗಣವನು ' ಕೃತಿಯನ್ನು ಮಾತ್ರ ಎಲ್ಲಾ ಪ್ರಗತಿಪರ ಚಿಂತಕರು, ಬುದ್ಧಿಜೀವಿಗಳು ವಿರೋಧಿಸಿರುವುದು ಕಂಡುಬರುತ್ತದೆ. ಅಂದಹಾಗೆ ಈ ಮೂರು ಕೃತಿಗಳಲ್ಲಿಯ ಉಲ್ಲೇಖಗಳು ಸ್ವೀಕಾರಾರ್ಹ ಅಥವಾ ಸಮರ್ಥನೀಯ ವಾದಂತಹವುಗಳೆಂದೇನಲ್ಲ. ಇವುಗಳಲ್ಲಿಯೂ ಸಹ ಎಲ್ಲಾ ಕೃತಿಗಳಲ್ಲಿ ಇರುವಂತೆಯೇ ದೋಷಗಳಿವೆ. ಆದರೆ ಸ್ವಲ್ಪ ಹೆಚ್ಚಾಗಿದ್ದು ಸಂಪ್ರದಾಯವಾದಿಗಳಲ್ಲಿ ದ್ವಂದ್ವತೆಯನ್ನು ಸೃಷ್ಟಿಸಿವೆ. ಹೀಗೆ ಈ ಕೃತಿಗಳು ಉಂಟು ಮಾಡಿರುವ ವಿವಾದಗಳಿಗೆ ಕಾರಣವಾದ ಅಂಶಗಳನ್ನು ಆ ಕೃತಿಗಳಿಂದಲೇ ತಿಳಿಯಲು ಆ ಕೃತಿಗಳನ್ನೇ ಮುಂದಿನ ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡು ವಿಶ್ಲೇಷಿಸಿದ್ದೇನೆ.

ಬಸವಣ್ಣನ ಜೀವನ ಚರಿತ್ರೆಯು ಇಂದು ಗೊಂದಲದಿಂದ ಕೂಡಿರಬಹುದು. ಆದರೆ, ಮುಂದೊಂದು ದಿನ ಇವುಗಳ ಸತ್ಯಾನುಸತ್ಯತೆಗಳನ್ನು ತಿಳಿಯಲು ಕಾಲ ಬದಲಾದಂತೆ, ಸಲಕರಣೆಗಳು ಬದಲಾದಂತೆ, ನೋಡುವ, ಗ್ರಹಿಸುವ, ವಿಶ್ಲೇಷಿಸುವ, ವಿಮರ್ಶಿಸುವ, ಪ್ರಶ್ನಿಸುವ ಕ್ರಮಗಳು ಬದಲಾಗಬಹುದು. ಆ ಮೂಲಕ ನಾವು ಇಂದು ವೈಚಾರಿಕ, ವೈಜ್ಞಾನಿಕ ದೃಷ್ಟಿಕೋನಗಳಿಂದ ಪರಿಶೀಲಿಸಿ, ಆತನ ಜೀವನಚರಿತ್ರೆಯನ್ನು ಅರ್ಥೈಸಿಕೊಳ್ಳಬೇಕಾಗಿದೆ. ಹೀಗೆ ಸಮಾಜದಲ್ಲಿನ ಕೆಲವು ಬೆಳವಣಿಗೆಗಳನ್ನು ಒಂದು ಕಾಲಕ್ಕೆ ಒಪ್ಪಿಕೊಳ್ಳದ ಜನತೆ ಕಾಲ ಗತಿಸಿದಂತೆ ಅದೇ ಹೇಳಿಕೆಗಳನ್ನು ಅದೇ ಜನತೆ ಒಪ್ಪಿಕೊಂಡಿರುವ ಸಂದರ್ಭಗಳೂ ಇವೆ. ಅನುಮಾನಿತ ಪ್ರಶ್ನೆಗಳಿಂದ ಕೂಡಿದ ಸಾಹಿತ್ಯ ಕೃತಿಗಳು ಹೀಗೆ ಬೆಳಕಿಗೆ ಬರುವುದರ ಮೂಲಕ ಅವುಗಳಿಗೆ ಸಮಾಜದಲ್ಲಿ ಗೌರವ ದೊರೆಯುತ್ತದೆ ಎನ್ನಬಹುದು. ಈ ಅನುಮಾನಿತ ಪ್ರಶ್ನೆಗಳನ್ನು ಮತ್ತೆ ಅಧ್ಯಯನ, ಸಂಶೋಧನೆಗಳಿಗೆ ಅಳವಡಿಸಿ ಸತ್ಯವನ್ನು ಕಂಡುಕೊಳ್ಳಬಹುದು ಹಾಗೂ ಅದರ ಜಾಡಿನಲ್ಲಿ ನಡೆದು ಸತ್ಯದ ದರ್ಶನವನ್ನಾದರೂ ಮಾಡಿ ಸತ್ಯದ ಘಟನೆಯ ಬಳಿಯಾದರೂ ಹೋಗಬಹುದು. ಈ ರೀತಿಯ ಅನುಮಾನಿತ ಪ್ರಶ್ನೆಗಳೇ ಇಲ್ಲದಿದ್ದರೆ ಸತ್ಯದ ಹುಡುಕಾಟವಾದರೂ ಹೇಗೆ ಸಾಧ್ಯ? ಇಂದು ಪಶ್ಚಿಮದವರು ವೈಜ್ಞಾನಿಕ, ತಂತ್ರಜ್ಞಾನವನ್ನು ಬಳಸಿ ವೈಚಾರಿಕತೆಯ ನೆಲೆಯಲ್ಲಿ ತಮ್ಮ ಗತ ಕಾಲದ ವಾಸ್ತವವನ್ನು ಪುನರ್ ರಚಿಸಿಕೊಳ್ಳುತ್ತಿರುವಂತೆಯೆ ನಾವೂ ಸಹ ಆ ನಿಟ್ಟಿನಲ್ಲಿ ಶರಣರ ಜೀವನ ಚರಿತ್ರೆಯನ್ನು ಪುನರ್ ರಚಿಸಿಕೊಳ್ಳಬೇಕಿದೆ.

ಈ ರೀತಿಯ ವಿವಾದಿತ ಅಂಶಗಳನ್ನು ಪ್ರಕಟಿಸಿ ವಿವಾದಗಳನ್ನು ಸೃಷ್ಟಿಸಿರುವವರ ಸಂಖ್ಯೆ ೭೦ರ ದಶಕದಿಂದೀಚೆಗೆ ದಿನೇ ದಿನೇ ಹೆಚ್ಚುತ್ತಿದೆ. ಇದು ಹೀಗೆಯೇ ಮುಂದುವರಿದರೆ ಮುಂದೊಂದು ದಿನ 'ವಿವಾದಾತ್ಮಕ ಸಾಹಿತ್ಯ ' ಎಂಬ ಪ್ರಕಾರ ಪ್ರಚಾರಕ್ಕೆ ಬಂದರೂ ಬರಬಹುದು. ಆಗ ಆಧುನಿಕ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಾದ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ -ದಲಿತ, ಮಹಿಳಾ, ವಿಮರ್ಶಾ ಸಾಹಿತ್ಯ ಪ್ರಕಾರಕ್ಕೆ 'ವಿವಾದಾತ್ಮಕ ಸಾಹಿತ್ಯ ' ಪ್ರಕಾರವೊಂದನ್ನು ಹೊಸದಾಗಿ ಸೇರ್ಪಡೆ ಮಾಡಿಕೊಳ್ಳಬೇಕಾಗುತ್ತದೆ. ಇದರಲ್ಲಿ ಅನುಮಾನವೇ ಇಲ್ಲ.

## ಅಧ್ಯಾಯ : ೩

# ವಿವಾದಗಳ ಸುಳಿಯಲ್ಲಿ 'ಮಹಾಚೈತ್ರ' ನಾಟಕ

**ಪೀಠಿಕೆ :** ಎಚ್.ಎಸ್.ಶಿವಪ್ರಕಾಶ್ ಅವರ ಮೊದಲ ನಾಟಕ 'ಮಹಾಚೈತ್ರ' ಪ್ರಕಟಣೆ ಆದಾಗ ಎಲ್ಲರಿಂದಲೂ ಮೆಚ್ಚುಗೆ ಪಡೆದು ಯಾವುದೇ ತೆರನಾದ ಪ್ರಚಾರ, ಗೊಂದಲಕ್ಕೆ ಒಳಗಾಗಿರಲಿಲ್ಲ ಎಂದು ತಿಳಿದುಬರುತ್ತದೆ. ಈ ಕೃತಿಯಲ್ಲಿನ ಕಥೆಯನ್ನು ಲೇಖಕರು ಸಮಕಾಲೀನ ಸಮಾಜದೊಂದಿಗೆ ಸ್ವಲ್ಪ ಬೆರೆಸಿಕೊಂಡು ರಚಿಸಿದಂತಿದೆ ಎಂದು ಹೇಳಬಹುದು. ೮೫ರ ದಶಕದ ರಾಜಕೀಯ ಧೋರಣೆಗಳು, ಕೆಳವರ್ಗದವರ ನೋವು-ಹತಾಶೆಗಳನ್ನು ಹಾಗೂ ಬಡವರ, ಕೂಲಿಕಾರರ ನಡುವಿನ ಒಂಟಿತನಗಳನ್ನು ಮತ್ತು ತಮ್ಮ ಧರ್ಮದಲ್ಲಿನ ಧರ್ಮಾಂಧತೆಯನ್ನು ಗಮನಿಸಿ ಬರೆದಂತಿದೆ. ಇವರು ಸಮಕಾಲೀನ ಸಮಾಜವನ್ನು ಚಿತ್ರಿಸಲು ೧೨ ನೇ ಶತಮಾನದಲ್ಲಿ ನಡೆದ ಸಾಮಾಜಿಕ ಕ್ರಾಂತಿಯ ನಂತರದ ವಸ್ತುವನ್ನು ಆಯ್ಕೆ ಮಾಡಿಕೊಂಡು ಈ ನಾಟಕವನ್ನು ರಚಿಸಿದ್ದಾರೆ. ಇಲ್ಲಿ ಲೇಖಕರು ಆಧುನಿಕತೆಯನ್ನು ಇತಿಹಾಸದೊಂದಿಗೆ ಬೆರೆಸುವಾಗ ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯವನ್ನೂ ಮೀರಿ ಆಚೆ ಹೋಗಿದ್ದಾರೆ ಎಂದು ಅವರ ನಾಟಕ ಕೃತಿಯಿಂದಲೇ ಗುರುತಿಸಬಹುದು. ಒಂದು ನಾಟಕ ಕಲಾ ಕೃತಿಯಲ್ಲಿ ಏನೆಲ್ಲಾ ಇರಬೇಕಾಗಿತ್ತೋ ಅದೆಲ್ಲಾ ಇರಬೇಕೆಂದಿಲ್ಲ, ಆದರೂ ಸಹ ವಾಸ್ತವದ ಕಡೆ ಸ್ವಲ್ಪ ಗಮನ ನೀಡಿ ಎಚ್ಚರಿಕೆಯಿಂದ ಇರಬೇಕಾಗಿರುವುದು ಪ್ರತಿಯೊಬ್ಬ ಲೇಖಕನ, ಬರಹಗಾರನ ಕರ್ತವ್ಯವಾಗಿದೆ. ಇಲ್ಲಿ ಲೇಖಕರು ಈ ಜೀವನದ ಜಂಜಾಟ, ಹತಾಶೆ ಮತ್ತು ಸೋಲು-ಗೆಲುವನ್ನು ಕಲಾಕೃತಿಯಲ್ಲಿ ಕಟ್ಟಲು ಕಲ್ಯಾಣ ಕ್ರಾಂತಿಯ ಕಥಾವಸ್ತುವನ್ನು ಆಯ್ಕೆ ಮಾಡಿಕೊಂಡು ನಿರೂಪಿಸಿರುವುದು ಆಧುನಿಕತೆಯನ್ನು ಪ್ರತಿಬಿಂಬಿಸುತ್ತದೆ. ಹನ್ನೆರಡನೆಯ ಶತಮಾನದಲ್ಲಿ ನಡೆದ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಮಾನತೆಯ ಕ್ರಾಂತಿಗೆ ಕಾರಣರಾದ ಬಸವಾದಿ ಶರಣರನ್ನು ಮತ್ತು ಈ ಕ್ರಾಂತಿಗೆ ಕಾರಣವಾದ ಅಂಶಗಳನ್ನು ಮಾತ್ರ ಬಳಸಿಕೊಂಡು ಕಥಾವಸ್ತುವನ್ನು ನಿರೂಪಿಸಿದ್ದಾರೆ. ಇಲ್ಲಿ ಮುಖ್ಯವಾಗಿ ವಿವಾದಗಳಾಗಿ ಮುಟ್ಟುಗೋಲಾದ ಈ ನಾಟಕಕ್ಕೆ ಸಂಬಂಧಿಸಿದಂತೆ ಕೆಲವು ಲಕ್ಷಣಗಳನ್ನು ಗುರುತಿಸಬಹುದು.

*ಅವುಗಳಲ್ಲಿ ಪ್ರಮುಖವಾಗಿ ೪ ಲಕ್ಷಣಗಳು ಹೀಗಿವೆ :*

ಅ) ಆಧುನಿಕ ಅನುಭವ ಸಾಕ್ಷಾತ್ಕಾರ. ಆ) ಸಮಾಜವನ್ನು ಪ್ರಭಾವಿತಗೊಳಿಸಲು ಸದಾಶಯ ವಿನ್ಯಾಸ. ಇ) ಭೂತ ಮತ್ತು ವರ್ತಮಾನಗಳನ್ನು ಬೆಸದಿರುವಿಕೆ. ಈ)ಬದುಕನ್ನು ಹಂಚಿಕೊಳ್ಳುವ ಕಲೆಯ ಪರ್ಯಾಯತೆಯನ್ನು ಎತ್ತಿ ತೋರಿಸಿರುವುದು.

ಉ)ವಿಕೃತ, ವ್ಯಂಗ್ಯ, ಅಶ್ಲೀಲ ಎನಿಸುವಂತಹ ಹಾಗೂ ಇತಿಹಾಸವನ್ನು ತಿರುಚಲು ಪ್ರಯತ್ನಿಸಿದ್ದಾರೆ ಎಂಬಂತಹ ಕೆಲವು ಅಂಶಗಳು. ಊ)ಪರಂಪರೆಯ ಕ್ರಾಂತಿಕಾರಿ ಕಲ್ಪನೆ. ಇವು ಈ ಸಾಹಿತ್ಯ ಕೃತಿಯಲ್ಲಿ ಮುಖ್ಯವಾಗಿ ರೂಪನಿಷ್ಠ, ವಸ್ತುನಿಷ್ಠ , ಪ್ರತಿಮಾನಿಷ್ಠ ತಾಂತ್ರಿಕ ಕೌಶಲ್ಯವನ್ನು ಸಹ ಪಡೆದಕೊಂಡಿದೆ ಎಂದು ಗುರುತಿಸಬಹುದು.

ಈ ಕೃತಿಯು ಪ್ರಕಟಣೆಯಾದ ಹೊಸದರಲ್ಲಿ ಕಟುವಾದ ವಿಮರ್ಶೆಗಳಿಗೆ ಒಳಗಾಗಿತ್ತಾದರೂ ಸಮುದಾಯದ ವಿರೋಧಕ್ಕೆ ಒಳಗಾಗಿರಲಿಲ್ಲ ಎಂದು ತಿಳಿಯುತ್ತದೆ. ಇದು ಪ್ರಕಟಣೆಯಾಗಿ ಸರ್ಕಾರದಿಂದ ನಿಷೇಧಕ್ಕೆ ಒಳಗಾದ ಕಾಲಕ್ಕೆ ಸುಮಾರು ೧೦ ವರ್ಷಗಳ ವ್ಯತ್ಯಾಸವಿದೆ. ಮುಟ್ಟುಗೋಲಾದ ಈ ಎಲ್ಲಾ ಮೂರೂ ಕೃತಿಗಳಿಗೂ ಇಲ್ಲಿ ಪರಸ್ಪರ ಸಂಬಂಧವನ್ನು ಗುರುತಿಸಬಹುದು. ಇವು ಸರಿ ಸುಮಾರು ೧೯೮೬-೮೭, ೧೯೯೬-೯೭ ಹಾಗೂ ೨೦೦೭-೦೮ರ ಸಂದರ್ಭದಲ್ಲಿ ಪ್ರಕಟನೆಯಾದಂತಹವುಗಳೇ ಆಗಿದ್ದು ಪ್ರತಿಯೊಂದು ಕೃತಿಗೂ ಸುಮಾರು ೧೦ ವರ್ಷಗಳ ಅಂತರವಿದೆ. ಇದೊಂದು ರೀತಿ ಕುತೂಹಲಕಾರಿಯಾದ ಸಂಗತಿಯೇ ಎನ್ನಬಹುದು.

ಹನ್ನೆರಡನೆಯ ಶತಮಾನದ ಕಲ್ಯಾಣ ಕ್ರಾಂತಿಯ ವಸ್ತುವನ್ನು ಕೇಂದ್ರಬಿಂದುವಾಗಿಟ್ಟುಕೊಂಡು ರಚನೆಯಾದ ಲಂಕೇಶರ 'ಸಂಕ್ರಾತಿ' ಮತ್ತು ಗಿರೀಶ್ ಕಾರ್ನಾಡರ 'ತಲೆದಂಡ' ನಾಟಕಗಳು ಪಡೆದುಕೊಂಡ ಮನ್ನಣೆಯನ್ನು 'ಮಹಾಚೈತ್ರ' ನಾಟಕ ಪ್ರಾರಂಭದಲ್ಲಿ ಪಡೆದುಕೊಂಡಂತೆ ಕಾಣುವುದಿಲ್ಲ. ಆದರೂ ಇದು ಶಾಲಾ-ಕಾಲೇಜುಗಳಲ್ಲಿ ಪಠ್ಯ ಪುಸ್ತಕವಾದಾಗ ಮತ್ತು ರಾಷ್ಟ್ರೀಯ ನಾಟಕೋತ್ಸವ ಮಟ್ಟಕ್ಕೂ ಬೆಳೆದು ನಿಂತಾಗ ಗಂಭೀರವಾಗಿ ಓದುವ ವರ್ಗವನ್ನು ಸೃಷ್ಟಿಸಿಕೊಂಡಿತು. ಅಂತಹ ಸಂದರ್ಭದಲ್ಲಿ ನಾಟಕದಲ್ಲಿನ ಕೆಲವೊಂದು ಪದ ಪ್ರಯೋಗಗಳು ಅಶ್ಲೀಲವಾಗಿವೆ ಮತ್ತು ವಚನಯುಗದ ಚರಿತ್ರೆಯನ್ನು ಇಲ್ಲಿ ತಿರುಚಲಾಗಿದೆ ಎಂದು ಗುರುತಿಸಿದ ಕೆಲವು ಮಠಾಧೀಶರುಗಳು ಪಠ್ಯ ಪುಸ್ತಕದಿಂದ ಹಿಂಪಡೆಯುವಂತೆ ಕರ್ನಾಟಕ ಸರ್ಕಾರವನ್ನು ಒತ್ತಾಯಿಸಿದರು.

ಹೊಸದರಲ್ಲಿ ರಂಗ ಮಂಚಿಕೆಯಲ್ಲಿ ಪ್ರದರ್ಶನಕ್ಕೆ ಬಂದಾಗ ಹಲವು ಗಣ್ಯ ವಿದ್ವಾಂಸರ, ಚಿಂತಕರ ಹಾಗೂ ಸಂಘ -ಸಂಸ್ಥೆಗಳ ವಲಯಗಳಿಂದ ಪ್ರಶಂಸನೀಯ, ಮೆಚ್ಚುಗೆಯ ಮಾತುಗಳು ಕೇಳಿ ಬಂದಿರುವುದನ್ನು ನಾವು ಪತ್ರಿಕೆಗಳ ಮತ್ತು ಲೇಖಕರ ಅಭಿಪ್ರಾಯಗಳಿಂದ ತಿಳಿಯಬಹುದು. ಈ ನಾಟಕವು ತೆರೆಮೇಲೆ ಕಾಣಿಸಿಕೊಂಡಂದಿನಿಂದಲೂ ರಂಗ ವಲಯದಲ್ಲಿ ಕೆಲವರ ಪರ -ವಿರೋಧವನ್ನು

ಕಟ್ಟಿಕೊಂಡಿತ್ತು. ಆದರೂ ಸಹ ಮತ್ತೊಮ್ಮೆ ಈ ನಾಟಕವನ್ನು ಪ್ರದರ್ಶನಕ್ಕೆ ಎತ್ತಿಕೊಂಡ ಜಿ.ವಿ. ರಾಜಾರಾಂ ಅವರು ಬಸವ ಸಮಿತಿಯ ಸಭಾಂಗಣದಲ್ಲಿ ಬಸವ ಜಯಂತಿಯಂದು ಅದರಲ್ಲೂ ಬಸವ ಸಮಿತಿ ಅವರ ಬೇಡಿಕೆಯ ಮೇರೆಗೆ ಪ್ರದರ್ಶನ ನೀಡಿದದ್ದು ಆಶ್ಚರ್ಯವಾಗುತ್ತದೆ.

ಕೃತಿಯಲ್ಲಿ ಅಶ್ಲೀಲ ಪದಗಳಿವೆ ಅಥವಾ ಇತಿಹಾಸವನ್ನು ತಿರುಚಲಾಗಿರುವ ಪದ ಪ್ರಯೋಗಗಳಿವೆ ಎಂದು ವಾದಿಸಲು ಪ್ರಾರಂಭಿಸಿದವರಲ್ಲಿ ಉತ್ತರ ಕರ್ನಾಟಕದ ಕೆಲವೊಂದು ವೀರಶೈವ ಮಠಾಧೀಶರುಗಳು ಮತ್ತು ಅವರ ಅನುಯಾಯಿಗಳು ಪ್ರಮುಖರೆಂದು ಗುರುತಿಸಬಹುದು. ಇವರು ಸುಮಾರು ೧೯೯೪- ೯೫ ರಲ್ಲಿ ಕೃತಿಯನ್ನು ವಿರೋಧಿಸಿ ಇನ್ನು ಮುಂದೆ ಈ ನಾಟಕ ಕೃತಿಯು ವಿಶ್ವವಿದ್ಯಾಲಯಗಳಲ್ಲಿ ಪಠ್ಯವಾಗಿ ಮುಂದುವರಿಯಕೂಡದು ಎಂದು ಒತ್ತಾಯಪಡಿಸಿದರು. ನಂತರ ಈ ನಾಟಕವನ್ನು ಹಿಂಪಡೆಯಬೇಕೆಂದು ಧರಣಿ, ಸತ್ಯಾಗ್ರಹ, ರಸ್ತೆ ತಡೆ, ಚರ್ಚೆ, ಸಂವಾದಗಳನ್ನು ನಡೆಸಿದರು ಎಂಬುದನ್ನು ತಿಳಿಯಬಹುದು. ಶರಣರ ಬಗ್ಗೆ ಮತ್ತು ಬಸವ ಧರ್ಮದ ಮಠಾಧೀಶರುಗಳ ಬಗ್ಗೆ ಈ ನಾಟಕ ಕೃತಿಯು ಸಮಾಜದಲ್ಲಿನ ಯುವ ಜನತೆಯಲ್ಲಿ ತಪ್ಪು ಕಲ್ಪನೆಯನ್ನು ಮೂಡಿಸುತ್ತಿದೆ ಎಂಬುದು ನಿಷೇಧಕ್ಕೆ ಪ್ರಮುಖವಾದ ಕಾರಣವೆಂದು ಹೇಳಬಹುದು.

ಸಮಾಜದಲ್ಲಿನ ಶಾಂತಿಯನ್ನು ಕದಡಿದ ಈ ಕೃತಿಯನ್ನು ನ್ಯಾಯಾಲಯವು ಕರ್ನಾಟಕದ ಮಟ್ಟಿಗೆ ವಿಶ್ವವಿದ್ಯಾಲಯಗಳಿಂದ ಪಠ್ಯಪುಸ್ತಕದಿಂದ ಹಿಂಪಡೆಯಿತ್ತಾದರೂ ಪೂರ್ಣ ಪ್ರಮಾಣದಲ್ಲಿ ಕೃತಿಯನ್ನು ರದ್ದುಪಡಿಸಲಿಲ್ಲ. ಮತ್ತೆ ಅದನ್ನು ಸಂಪೂರ್ಣ ನಿಷೇಧಿಸಬೇಕೆಂದು ಒತ್ತಾಯಿಸಿ ಕೋರ್ಟು ಕಛೇರಿಗಳ ಮೆಟ್ಟಿಲಿನವರೆಗೂ ಕೊಂಡೊಯ್ಯಲಾಗಿತ್ತು. ಆದರೂ ಕೃತಿಯ ಪರವಾಗಿ ಸಾಕಷ್ಟು ಜನ ಬುದ್ದಿ ಜೀವಿಗಳು, ಪ್ರಗತಿಪರ ಜನತೆ , ಮಹಿಳಾ ಮತ್ತು ದಲಿತ ಸಂಘಟನೆಗಳು ಹಾಗೂ ಹಿಂದುಳಿದ ವರ್ಗದ ಚಿಂತಕರು, ಲೇಖಕರು ಬೆಂಬಲ ಸೂಚಿಸಿದರು. ಈ ಇಬ್ಬರ ನಡುವಿನ ಸಂವಾದ, ಚರ್ಚೆ, ಗೊಂದಲದ ನಡುವೆ ಅನಿವಾರ್ಯವಾಗಿ ಸರ್ಕಾರ ಸಮಾಜದಲ್ಲಿನ ಶಾಂತಿಯನ್ನು ಕಾಪಾಡುವಲ್ಲಿ ಕೃತಿಯನ್ನು ನಿಷೇಧಿಸಿತು. ಇದಕ್ಕೆ ಕಾರಣ ಅಂದಿನ ಸರ್ಕಾರದಲ್ಲಿದ್ದ ರಾಜ ಪ್ರಭುತ್ವ, ಮೂಲಭೂತವಾದಿಶಾಹಿ ಗುಣಗಳನ್ನು ಒಳಗೊಂಡ ರಾಜಕಾರಣಿಗಳು ಎಂದು ಗುರುತಿಸಬಹುದು. ಇದರಿಂದ ಒಬ್ಬ ಸೃಜನಶೀಲ ಲೇಖಕನ ಅಭಿವ್ಯಕ್ತಿ ಸ್ವಾತಂತ್ರ್ಯ ವೆಂದರೇನು ? ಮತ್ತು ಸೃಜನಶೀಲ ಸಾಹಿತ್ಯ ಎನಿಸಿಕೊಳ್ಳಬೇಕಾದ ಕೃತಿ ವ್ಯವಸ್ಥೆಯ ಜೊತೆ ಎಂತಹ ಸಂಬಂಧವನ್ನು ಹೊಂದಿರಬೇಕು ? ಎಂಬ ಪ್ರಶ್ನೆಗಳು ಅಂದಿನ ಸಮಾಜದಲ್ಲಿ ಕೇಳಿಬಂದಿವೆ.

ಈ ಕೃತಿಯ ಬಗೆಗೆ ಎತ್ತಲಾದ ಪ್ರಶ್ನೆಗಳಿಗೆ ಪ್ರಾರಂಭದಲ್ಲಿ ಉತ್ತರಗಳನ್ನು ಕಂಡುಕೊಳ್ಳಲು ಲೇಖಕರು ಸಾಕ್ಷ್ಯಾಧಾರಗಳನ್ನು ನೀಡಿದರೂ ಸಹ ಅದನ್ನು ಒಪ್ಪಿಕೊಳ್ಳದ ಕೆಲವರು ವಿರೋಧಿಸಿದರು. ಹೀಗೆ ವಿವಾದಗಳಿಗೆ ಒಳಗಾಗಿ ಸರ್ಕಾರದಿಂದ ತಡೆಯಾಜ್ಞೆಗೆ ಸಿಕ್ಕಿದ ಈ ಕೃತಿಯನ್ನು ಕುರಿತು ವಿಮರ್ಶಕರಲ್ಲೊಬ್ಬರಾದ ಜಿ.ರಾಜಶೇಕರ್ ಅವರು ('ಮಠಾಧೀಶರು ಮತ್ತು ಲೇಖಕರ ಸ್ವಾತಂತ್ರ್ಯ') ತಮ್ಮ ಈ ಕೆಳಕಂಡಂತೆ ಲೇಖನದಲ್ಲಿ ನಿರೂಪಿಸಿದ್ದಾರೆ.

''ಸ್ವಾತಂತ್ರ್ಯ ಮತ್ತು ಜವಾಬ್ದಾರಿಗಳ ಕುರಿತು ನಾವು ಇನ್ನಷ್ಟು ಸೂಕ್ಷ್ಮವಾಗಿ ಯೋಚಿಸದೆ ಇದ್ದರೆ ನಮಗೆ ಈ ವಿವಾದದ ಒಳಮರ್ಮಗಳು ತಿಳಿಯುವುದಿಲ್ಲ. ಉದಾಹರಣೆಗೆ 'ಮಹಾಚೈತ್ರ' ವಚನ ಯುಗದ ಚರಿತ್ರೆಯನ್ನು ತಿರುಚಿ ಹಾಕಿದೆ ಎಂಬ ಆಪಾದನೆಯನ್ನೇ ಪರಿಶೀಲಿಸೋಣ. ಹೀಗೆ ಆಪಾದನೆ ಮಾಡುವ ವೀರಶೈವ ಮಠಾಧೀಶರುಗಳು ವಚನ ಯುಗದ ಸತ್ಯವನ್ನು ಮತ್ತು ಅದರ ಕಾಳಜಿಗಳನ್ನು ಪ್ರತಿನಿಧಿಸುವಂತಹವರಲ್ಲ. ವಚನಕಾರರ ಚಳುವಳಿ, ಮಠಗಳಾಗಿ, ಜಾತಿಗಳಾಗಿ ರೂಪಾಂತರ ಹೊಂದಿರುವ ಹಿನ್ನೆಲೆಯಲ್ಲಿ ನಾವು ಈ ವಿವಾದವನ್ನು ನೋಡಬೇಕು. 'ಮಹಾಚೈತ್ರ' ನಾಟಕದ ಬಗ್ಗೆ ಜಗಳ ತೆಗೆಯುವುದರ ಮುಖಾಂತರ ಈ ಮಠಾಧೀಶರು ವಚನ ಯುಗದ ತಮ್ಮದೇ ಆವೃತ್ತಿಯ ಚರಿತ್ರೆಯನ್ನೂ , ತಮ್ಮದೇ ಆಯ್ಕೆಯ ವಚನಗಳನ್ನು ಜನರ ಮೇಲೆ ಹೇರಲು ಪ್ರಯತ್ನಿಸುತ್ತಿದ್ದಾರೆ. ಈ ನಮೂನೆಯ 'ಮೂಲಭೂತವಾದೀ' ಹಠ ಕಾಣಿಸುತ್ತಿರುವುದು ವೀರಶೈವ ಮಠಾಧೀಶರಲ್ಲಿ ಮಾತ್ರವಲ್ಲ , ಇವತ್ತಿನ ಎಲ್ಲ ಧರ್ಮಗಳಿಗೆ ಸೇರಿದ ಜನರೂ ತಮ್ಮ ತಮ್ಮ ಧರ್ಮಗಳ ಸಂಕೋಲೆಗಳಲ್ಲಿ ಬಂಧಿತರಾಗಿದ್ದಾರೆ. ಯಾವುದೇ ಧರ್ಮದ ಮರುಪರಿಶೀಲನೆ ಮತ್ತು ಮರು ವ್ಯಾಖ್ಯಾನಗಳನ್ನು ಆ ಧರ್ಮದ ಅನುಯಾಯಿಗಳಲ್ಲಿ ಕೆಲವರು ವಿರೋಧಿಸುವುದಾದರೂ ಇದೇ ಕಾರಣಕ್ಕೆ.

ಈ ಹಿನ್ನೆಲೆಯಲ್ಲಿ 'ಮಹಾಚೈತ್ರ'ದ ವಿವಾದವನ್ನು ನೋಡಿದಾಗ ಒಂದು ಅಂಶ ಸ್ಪಷ್ಟವಾಗುತ್ತದೆ. ವಿವಾದವಿರುವುದು ಆ ನಾಟಕದ ಕೆಲವು ಶಬ್ಧಗಳ ಬಗ್ಗೆ ಅಲ್ಲ ಅಥವಾ ನಾಟಕದ ನಾಯಕನ ಮರಣ ವೃತ್ತಾಂತದ ಸತ್ಯಸತ್ಯತೆಯ ಬಗ್ಗೆ ಕೂಡ ಅಲ್ಲ ''

ಇಲ್ಲಿ ನಾವು ಪ್ರಮುಖವಾಗಿ ಗಮನಿಸಬೇಕಾದ ಅಂಶವೆಂದರೆ, ನಾಟಕಕಾರ ತನ್ನ ಅಭಿವ್ಯಕ್ತಿ ಸ್ವಾತಂತ್ರ್ಯದ ಹೆಸರಿನಲ್ಲಿ ಸಮಾಜದ ಕಟ್ಟಳೆಗಳನ್ನು ದಾಟಿ ಹೋಗಬಾರದು. ಜೊತೆಗೆ ಇಲ್ಲಿ ಇತಿಹಾಸವನ್ನು ಸಮಕಾಲೀನ ಸಮಾಜಕ್ಕೆ ತಂದು ಚಿತ್ರಿಸುವಾಗ ಚರಿತ್ರೆಯ ಸತ್ಯಾನು ಸತ್ಯತೆಗಳನ್ನು ಕಡೆಗಣಿಸಿ ಕಲಾತ್ಮಕವಾಗಿ ಚಿತ್ರಿಸಬಾರದು. ಈ ರೀತಿಯಲ್ಲಿ

ಚರಿತ್ರೆಯನ್ನು ಕಲಾತ್ಮಕವಾಗಿ ಚಿತ್ರಿಸುವುದರಿಂದ ಮುಂದಿನ ತಲೆಮಾರಿನ ಜನತೆಯ ಮೇಲೆ ಗಾಢವಾದ ಅಡ್ಡಪರಿಣಾಮಗಳು ಶರಣರ ಬಗೆಗೆ ಅಷ್ಟೇ ಅಲ್ಲ ಸಾಮಾಜಿಕ, ಧಾರ್ಮಿಕ ಕ್ರಾಂತಿಯ ಮೇಲೂ ಬೀರುತ್ತದೆ ಎಂದು ಹೇಳಬಹುದು. ಇಲ್ಲಿ ಒಂದು ಕಡೆ ಮಠಾಧೀಶರು ಲೇಖಕರಿಗೆ ವಚನ ಸಾಹಿತ್ಯದ ಕಾಲವನ್ನು ಕೃತಿಗಳಲ್ಲಿ ಅರ್ಥೈಸಲು ನಿರಾಕರಿಸಿದಂತೆ ತೋರಬಹುದು ಅಥವಾ ಈ ನಾಟಕವನ್ನು ವಿರೋಧಿಸುತ್ತಿರುವವರು ಇಡೀ ಕಲ್ಯಾಣ ಕ್ರಾಂತಿಯನ್ನೇ ವಿರೋಧಿಸುತ್ತಿದ್ದಾರೆ ಎಂದು ಹೇಳಬಹುದು. ಹೀಗೆ ಬಸವಾದಿ ಶರಣರನ್ನು ಕೇಂದ್ರಬಿಂದುವಾಗಿಟ್ಟುಕೊಂಡು ಕಥೆ, ಕಾದಂಬರಿ, ನಾಟಕ, ಕಾವ್ಯ.... ಪ್ರಕಾರಗಳು ರಚನೆಯಾಗಿರುವ ಕೆಲವೊಂದು ಕೃತಿಗಳು ಇದಕ್ಕೂ ಮುಂಚೆಯೇ ವಿವಾದಗಳನ್ನು ಸೃಷ್ಟಿಸಿವೆ. ಅದರಲ್ಲಿ 'ಸಂಕ್ರಾಂತಿ' ಪ್ರಮುಖವಾದದ್ದು. ಇದಾದನಂತರ 'ತಲೆದಂಡ' ಎಂದು ಹೇಳಬಹುದು.

ವಿವಾದದ ಸುಳಿಗೆ ಸಿಕ್ಕಿದ ಈ ನಾಟಕವು ರಾಷ್ಟ್ರೀಯ ನಾಟಕೋತ್ಸವದ ಮಟ್ಟಕ್ಕೂ ಹೋಗಿ ವಿವಾದಗಳಿಗೆ ಒಳಗಾಗಿ ಪಠ್ಯ ಪುಸ್ತಕದಿಂದ ಕೈಬಿಟ್ಟಿದ್ದರೂ ಸಹ ಈ ನಾಟಕವು ಹಲವು ಪ್ರಯೋಗಗಳನ್ನು ಕರ್ನಾಟಕದಾದ್ಯಂತ ನೀಡಿ ಯಶಸ್ವಿಯಾಗಿದೆ. ಲೇಖಕರು ತಮ್ಮ ಈ ಕೃತಿಯು ಎಬ್ಬಿಸಿರುವ ವಿಚಾರ, ಪ್ರಶ್ನೆಗಳಿಗೆ ಕೃತಿಯ ಆರಂಭದಲ್ಲಿ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. ''ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲರೂ ಸಲಿಗೆವಂತರಾಗಿ ಒಳಗೈಸಿದ್ದಾರೆ. 'ಆನುದೇವಾ ಹೊರಗಳವನು', 'ಸಂಬೋಳಿ, ಸಂಬೋಳಿ' ಎನ್ನುತ್ತ ಇಂಬಿನಲ್ಲಿ ಇದ್ದೇನೆ ! ಕೂಡಲ ಸಂಗಮ ದೇವಾ, ನಿಮ್ಮ ನಾಮವ ಹಿಡಿದ ಅನಾಮಿಕ ನಾನು ! '' ಎಂದು ಹೇಳುವಲ್ಲಿ ಲೇಖಕರ ಸೌಜನ್ಯವೂ ಇದ್ದು, ಬಸವಣ್ಣನ ಕೆಲವು ವಚನಗಳನ್ನು ನೆನಪಿಸುವಂತಿದೆ. ಯಾವ ಮನಕಲಕಿದ ಸನ್ನಿವೇಶ, ಸಂದರ್ಭ ಪರಿಸರ ಅಂದು ಬಸವಣ್ಣನನ್ನು ಅಸ್ಪೃಶ್ಯ ಜಾತಿಯಿಂದ ಬಂದ, ಕೆಳಜಾತಿ ಸಮುದಾಯದಿಂದ ಬಂದ ಹಿರಿಯ, ಕಿರಿಯ ಶರಣರನ್ನು ತನ್ನ ತಂದೆ-ತಾಯಿ, ಬಂಧು-ಬಳಗ ಎಂದು ಕರೆದುಕೊಂಡದ್ದು ತಾನು ಹುಟ್ಟಿದ ಜಾತಿಯನ್ನೂ ಲೆಕ್ಕಿಸದೆ ಶತ ಶತಮಾನಗಳಿಂದ ಅಜ್ಞಾನ, ಮೂಢನಂಬಿಕೆಗಳಿಂದ ತುಂಬಿ ತುಳುಕುತ್ತಿದ್ದ ಧರ್ಮವನ್ನು ಬಿಟ್ಟು ತಾನು ಕಟ್ಟಿದ ಪಂಥದಲ್ಲಿಯೂ ಸಹ ತನ್ನನ್ನು ತಾನು ಬಸವಣ್ಣ 'ಆನುದೇವಾ ಹೊರಗಣವನು' ಎಂದು ಕರೆದುಕೊಳ್ಳಲು ಕಾರಣವಾದರೂ ಏನು ? ಎಂಬುದು ಇನ್ನೂ ತಿಳಿದು ಬಂದಿಲ್ಲದಿರುವುದು ಆಶ್ಚರ್ಯವೇ ಸರಿ.

ಈ ನಾಟಕ ಪ್ರಕಟಣೆಗೂ ಮುಂಚೆಯೇ ಇಲ್ಲಿ ಬಳಕೆಯಾಗಿರುವ ದ್ರವ್ಯಗಳ ಬಗ್ಗೆ

ಅನೇಕ ಪ್ರಶ್ನೆಗಳು ಅನೇಕ ಬುದ್ಧಿಜೀವಿ ಪ್ರೇಕ್ಷಕರಿಂದ ಮತ್ತು ವಿಮರ್ಶಕರಿಂದ ಕೇಳಿಬಂದವು ಎಂದು 'ಲೇಖಕರ ಮಾತು'ಗಳಲ್ಲಿ ಲೇಖಕರು ಹೇಳಿಕೊಂಡಿರುವ ಅಂಶಗಳನ್ನು ಗಮನಿಸಿ ಈ ರೀತಿ ಪಟ್ಟಿ ಮಾಡಬಹುದು.

ಅ) ಚಾರಿತ್ರಿಕ ಅಂಶಗಳಿಗೆ ಅತಿಯಾದ ಪ್ರಾಧಾನ್ಯವನ್ನು ಏಕೆ ಕೊಟ್ಟಿರುವುದು ?

ಆ) ಚರಿತ್ರೆಯ ಜೊತೆ ಪುರಾಣವನ್ನೇಕೆ ಬೆಳೆಸಿರುವುದು ?

ಇ) ಹೀಗೆ ಎಲ್ಲಕ್ಕೂ ಮುಖ್ಯವಾಗಿ ಲೇಖಕರು, ಸಾಹಿತಿಗಳು, ಮತ್ತೆ ಮತ್ತೆ ಯಾಕೆ ಇತಿಹಾಸ, ಪುರಾಣ, ದಂತಕಥೆಗಳನ್ನು ಅದರಲ್ಲೂ ಮುಖ್ಯವಾಗಿ ೧೨ ನೇ ಶತಮಾನವನ್ನು ಕಲ್ಯಾಣದ ಕ್ರಾಂತಿಯನ್ನು , ಬಸವಣ್ಣನನ್ನು ಕೇಂದ್ರವಾಗಿಸಿಕೊಳ್ಳುವುದು ?

ಈ) ಈ ನಾಟಕದ ಶೈಲಿ, ಆಕೃತಿ ಯಾವುದು ? ಎಂಬಿತ್ಯಾದಿ ಪ್ರಶ್ನೆಗಳು ಸಮಾಜದಲ್ಲಿ ಕೃತಿ ಪ್ರಕಟಣೆಗೂ ಮುಂಚೆಯೇ ಕೇಳಿಬಂದವು. ಎಂಬುದನ್ನು ಲೇಖಕರು ಸ್ವತಃ ತಿಳಿಸಿದ್ದಾರೆ. ಇಲ್ಲಿ ಎತ್ತಲಾಗಿರುವ ಪ್ರಶ್ನೆಗಳನ್ನು ಗಮನದಲ್ಲಿಟ್ಟುಕೊಂಡು ನಾವು ನಾಟಕವನ್ನು ಓದಲು ಪ್ರಾರಂಭಿಸಿದರೆ ನಾಟಕದಲ್ಲಿ ಏನೂ ನಮಗೆ ಅರ್ಥವಾಗುವುದಿಲ್ಲ. ಈ ಪ್ರಶ್ನೆಗಳನ್ನು ನಾವು ನಾಟಕಕ್ಕೆ ಅನ್ವಯಿಸಿ ನೋಡಬಾರದು. ಅದು ಯಾವಾಗಲೂ ಚಲನಶೀಲ ವಾಗಿರುವಂತದ್ದು ಸಮಾಜದ ನಡುವೆ ಪ್ರದರ್ಶನಗೊಳ್ಳುವಂತದ್ದು ಆಗಿರುವಾಗ ಸಮಾಜಕ್ಕೆ ಬೇಕಾದ ಅಥವಾ ಬೇಡವಾದ ಅಂಶಗಳೆರಡನ್ನೂ ಒಳಗೊಂಡಿರುತ್ತದೆ. ವಿವಾದಗಳಿಗೆ ಒಳಗಾಗುವಂತಹ ಕಟುವಾದ, ವ್ಯಂಗ್ಯ, ಅಶ್ಲೀಲವೆನಿಸುವಂತಹ ಅಥವಾ ಇತಿಹಾಸವನ್ನು ತಿರುಚಿದ್ದಾರೆ ಎನ್ನುವಂತಹ ಅಂಶಗಳನ್ನು ಮುಂದಿನ ಪುಟಗಳಲ್ಲಿ ತಿಳಿಯಬಹುದು.

ಜಿ.ರಾಜಶೇಖರ್ ಅವರು 'ಮಹಾಚೈತ್ರ' ನಾಟಕವನ್ನು ಕುರಿತು ''ಇದುವರೆಗೂ ಆಗಿರುವ ವಿವಾದದ ತಲೆಬುಡವೇ ನಮಗೆ ಅರ್ಥವಾಗುವುದಿಲ್ಲ. ಸ್ವತಃ 'ಮಹಾಚೈತ್ರ' ನಾಟಕದ ವಸ್ತುವೇ ನಮ್ಮನ್ನು ಈ ಬಗೆಯ ಚಿಂತನೆಗೆ ಹಚ್ಚುವಂತಾಗಿದೆ. ಎಲ್ಲ ಸಮಸ್ಯೆಗಳಿಗೂ ತಮ್ಮ ಬಳಿ ಪರಿಹಾರವಿದೆ ಎಂದು ಜನರನ್ನು ನಂಬಿಸಲು ಹೊರಟ ಮಠಾಧೀಶರಿಗೆ ನಿಜಕ್ಕೂ ಅಪಥ್ಯವಾದದ್ದು ಆ ನಾಟಕದ ಆಧ್ಯಾತ್ಮಿಕ ಕಳವಳವೇ ಹೊರತು ಕೆಲವು ಶಬ್ದಗಳು ಅಥವಾ ಸಾಲುಗಳಲ್ಲ '' ಎಂದು ತಿಳಿಸಿರುವುದನ್ನು ನೋಡಬಹುದು. ಹೀಗೆ ಪ್ರತಿಯೊಂದು ಸಾಹಿತ್ಯ ಕೃತಿಯಲ್ಲಿಯೂ ವ್ಯಂಗ್ಯ, ಅಶ್ಲೀಲ ಅಥವಾ ಇತಿಹಾಸವನ್ನು ತಿರುಚಿ ಬಸವ ಧರ್ಮದ, ಕಲ್ಯಾಣ ಕ್ರಾಂತಿಯನ್ನು ಬರೆದಿದ್ದಾರೆ ಎಂದು ಭಾವಿಸಿ ಅವುಗಳನ್ನೆಲ್ಲಾ ವಿರೋಧಿಸುತ್ತಾ ಬಂದರೆ, ಇದುವರೆಗೂ ರಚನೆಯಾಗಿರುವ ಸಾಹಿತ್ಯ ಕೃತಿಗಳನ್ನೆಲ್ಲಾ ವಿರೋಧಿಸಬೇಕಾಗುತ್ತದೆ. ಹೀಗೆ ವಿರೋಧಿಸುತ್ತಾ ಬಂದರೆ ಮುಂದೊಂದು ದಿನ ಲೇಖಕರು ತಮ್ಮ ಜೀವನದ ಬಂಧನಗಳಿಂದ ಹೊರಬಂದು ತಮ್ಮ ಸುತ್ತಮುತ್ತಲಿನ ಪರಿಸರ, ಸಮಾಜವನ್ನು ಸೃಜನಶೀಲ ಸಾಹಿತ್ಯ ಕೃತಿಗಳಲ್ಲಿ

ಕಟ್ಟಿಕೊಡಲು ಮತ್ತು ವಿಶ್ಲೇಷಿಸಲು ಅಳವಡಿಸಿಕೊಂಡ ಒಂದು ವಿಶಿಷ್ಟ ಕ್ರಮವನ್ನು ಅರಿಯುವ ಅವಕಾಶವೇ ನಮಗಿರುವುದಿಲ್ಲ.

**ಕೃತಿಯ ಹಿನ್ನೆಲೆ :**

ನಾಡಿನ ಪ್ರಸಿದ್ಧ ವಿಮರ್ಶಕರಲ್ಲೊಬ್ಬರಾದ ಪ್ರೊ॥ ಕಿ.ರಂ ನಾಗರಾಜ್ ಅವರು ಕೃತಿಯ 'ಮುನ್ನುಡಿ 'ಯಲ್ಲಿ 'ಬಸವನಿಲ್ಲ ಕಲ್ಯಾಣದಲ್ಲಿ' ಎಂಬುದಾಗಿ ಅಭಿಪ್ರಾಯಪಡುತ್ತಾ ನಾಟಕದ ಒಟ್ಟಾರೆ ಸಾರಾಂಶವನ್ನು ಮತ್ತು ಅದರ ಸೋಲು -ಗೆಲುವುಗಳನ್ನು ಕಟ್ಟಿಕೊಟ್ಟಿದ್ದಾರೆ. ಇದನ್ನು ಗ್ರಹಿಸದೆ ನಾಟಕದ ಒಳಗಡೆ ಪ್ರವೇಶಿಕೆ ಮಾಡಿದ ಯಾವ ಸಹೃದಯನಿಗೂ ಸಹ ಗೊಂದಲ, ತಿರಸ್ಕಾರ, ಸಂಶಯ ವಚನ ಚಳುವಳಿಯ ಹಾಗೂ ಲೇಖಕರ ಬಗೆಗೆ ಮೂಡುವುದು ಸಹಜ. ಬಸವಣ್ಣನ ನೇತೃತ್ವದಲ್ಲಿ ನಡೆದ ಕಲ್ಯಾಣ ಚಳುವಳಿಯು ಹಿಡಿದ ದಾರಿಯನ್ನು ಮತ್ತು ಪಡೆದ ಸೋಲು -ಗೆಲುವುಗಳನ್ನು ನಾಟಕದ ಉದ್ದಕ್ಕೂ ಗುರುತಿಸಬಹುದು. ಇಲ್ಲಿ ಬಸವಣ್ಣ ತನ್ನ ನಿಲುವುಗಳನ್ನು ಮುರಿದ ಬಿಜ್ಜಳನ ಹಾಗೂ ಪುರೋಹಿತಶಾಹಿಯ ರಾಜಕಾರಣಿಗಳಿಂದ ಬೇಸತ್ತು ಕಲ್ಯಾಣದಿಂದ ಕೂಡಲಸಂಗಮಕ್ಕೆ ಹೊರಟು ಹೋಗಿದ್ದಾನೆ. ಅನಂತರದಲ್ಲಿ ಕಲ್ಯಾಣದಲ್ಲಿ ಏನಾಯಿತು ಎಂಬುದನ್ನು ಇಲ್ಲಿ ಲೇಖಕರು ಕಟ್ಟಿಕೊಟ್ಟಿದ್ದಾರೆ. ಇದೇ ರೀತಿಯಲ್ಲಿ ಕಥಾ ವಸ್ತುವನ್ನು ಒಳಗೊಂಡ 'ಧರ್ಮಕಾರಣ' ಕಾದಂಬರಿಯಲ್ಲಿ ಪಿ.ವಿ.ನಾರಾಯಣ ಅವರು ಬಸವನಿಲ್ಲದ ಕಲ್ಯಾಣದಲ್ಲಿ ನಡೆಯುವುದಾದರೂ ಏನು ಎಂಬುದನ್ನು ಮನಗಂಡು ಕಥೆಯನ್ನು ಅಲ್ಲಿಗೇ ನಿಲ್ಲಿಸಿದ್ದಾರೆ. ಪ್ರೊ॥ ಕಿ.ರಂ.ನಾಗರಾಜ್ ಹೇಳುವಂತೆ ''ಈ ನಾಟಕದಲ್ಲಿ ಬಸವಣ್ಣ ಎಲ್ಲಿಯೂ ಕಾಣಿಸಿಕೊಳ್ಳುವುದಿಲ್ಲವಾದರೂ, ಅವನ ವೃತ್ತಾಂತ ನಾಟಕದ ಉದ್ದಕ್ಕೂ ಹರಡಿಕೊಂಡಿದೆ. ಬಸವಣ್ಣನ ಆಶಯಗಳು ಬಿಜ್ಜಳನ ಕ್ರೌರ್ಯದಿಂದ ನುಚ್ಚುನೂರಾಗುತ್ತವೆ. ಅವನ ಚಳುವಳಿಯಲ್ಲಿ ಸೇರಿದ್ದ ಶರಣರಲ್ಲಿ ಕೆಲವರು ತಮ್ಮದೇ ದಾರಿ ಹಿಡಿಯುತ್ತಾರೆ. ಮತ್ತೆ ಕೆಲವರು ಬಸವಣ್ಣನ ಮುನ್ನೋಟವನ್ನು ಹಿಡಿದು ಅದನ್ನು ಪೂರೈಸಲು ಸಿದ್ಧವಾಗುತ್ತಾರೆ '' ಎಂಬುದನ್ನು ಕೃತಿಯಲ್ಲಿ ಗುರುತಿಸುತ್ತಾರೆ. ಹೀಗೆ ಚಳುವಳಿಯ ಆಕಾಂಕ್ಷೆಗಳನ್ನು ಹೊತ್ತು ನಡೆಯುವವರಲ್ಲಿ ಚೆನ್ನಬಸವಣ್ಣನು ನಾಟಕದ ಮೊದಲ ದೃಶ್ಯದಲ್ಲಿಯೇ ಬಸವಣ್ಣನ ಆದರ್ಶಗಳನ್ನು ಎತ್ತಿ ಹಿಡಿದು ಅವುಗಳನ್ನು ಪರಿಪಾಲಿಸಲು ಉಳವಿ ಕ್ಷೇತ್ರದ ಕಡೆಗೆ ತನ್ನ ಗುಂಪಿನ ಶರಣರೊಂದಿಗೆ ನಡೆದರೆ ಮಡಿವಾಳ ಮಾಚಯ್ಯನು ಮತ್ತು ಇನ್ನಿತರ ಶರಣರಾದ ಕಲಕೇತಯ್ಯ, ಬಹುರೂಪಿ ಚೌಡಯ್ಯ, ಮೋಳಿಗೆ ಮಾರಯ್ಯ, ಹೆಂಡದ ಮಾರಯ್ಯ, ಅಡಪದ ಅಪ್ಪಣ್ಣ ಮುಂತಾದವರು ಬಸವಣ್ಣನಿಗೆ ಉಂಟಾದ ಭಗ್ನತೆ ಮತ್ತು ಈ ಅಂತರ್ಜಾತಿಯ ವಿವಾಹದಿಂದ ಸಾಮಾಜಿಕ, ಧಾರ್ಮಿಕ ಚಳುವಳಿಗೆ ಒದಗಿದ ತೊಂದರೆಯನ್ನು ನಿವಾರಿಸಲು ಕಲ್ಯಾಣದಲ್ಲಿಯೇ

ನೆಲೆನಿಂತಿದ್ದಾರೆ. ಇಲ್ಲಿ "ಬಿಜ್ಜಳನು ವ್ಯವಸ್ಥೆಯ ಕ್ರೌರ್ಯಗಳನ್ನು ಎತ್ತಿಹಿಡಿದು ಕ್ರೌರ್ಯ ಹಾಗೂ ಹಿಂಸೆ ತಾಂಡವವಾಡಲು ಕಾರಣನಾಗುತ್ತಾನೆ. ಬಿಜ್ಜಳನ ಕ್ರೌರ್ಯ ಜಡವೈದಿಕರ ಧರ್ಮ ವ್ಯವಸ್ಥೆ ಮಾನವಿಕ ಚೈತನ್ಯವನ್ನು ನಾಶಗೊಳಿಸುತ್ತದೆ. ಇದರ ಮಧ್ಯ ಜೀವಂತ ಅಂಶಗಳನ್ನು ಹೊತ್ತ ಶರಣರು ಕ್ರಿಯೆಯತ್ತ ಚಲಿಸುತ್ತಾರೆ " ಎಂದು ಕಿ.ರಂ. ಅವರು ನಾಟಕದ ಒಟ್ಟಾರೆಯ ಚಿತ್ರಣವನ್ನು ಕಟ್ಟಿಕೊಡುತ್ತಾರೆ.

ಹೀಗೆ ಇಡೀ ನಾಟಕದ ಚಿತ್ರಣವಿರುವುದು ಬಸವಣ್ಣ ಕೂಡಲ ಸಂಗಮಕ್ಕೆ ಹೋದ ನಂತರ ನಡೆಯುವ ಕಥಾವಸ್ತು. ಇಲ್ಲಿ ಬಸವಣ್ಣ ನೇರವಾಗಿ ಕಾಣಿಸಿಕೊಳ್ಳುವುದಿಲ್ಲವಾದರೂ ಸಹ ಆತನ ವೃತ್ತಾಂತ ನಾಟಕದ ಉದ್ದಕ್ಕೂ ಹರಡಿಕೊಂಡಿದೆ. ಬಸವಣ್ಣನ ಅವಸಾನದ ದೃಶ್ಯವನ್ನು ಎರಡನೇ ಅಂಕದ ಎರಡನೇ ದೃಶ್ಯದಲ್ಲಿ ಬಹುರೂಪಿ ಚೌಡಯ್ಯ, ಕಲಕೇತಯ್ಯ, ನಗೆಯಮಾರಿತಂದೆ ಈ ಮೂರು ಜನ ಶರಣರು ಒಳನಾಟಕದಲ್ಲಿ ನೀಲಾಂಬಿಕೆಗೆ ಆಡಿ ತೋರಿಸುತ್ತಾರೆ. ಇಲ್ಲಿ ಬಿಜ್ಜಳನಿಗಿಂತ ಮುಂಚೆಯೇ ಅಂದರೆ ಕಲ್ಯಾಣ ಕ್ರಾಂತಿಗಿಂತ ಮುಂಚೆಯೇ ಬಸವಣ್ಣ ಐಕ್ಯನಾಗಿದ್ದಾನೆ. ಅದೇ ರೀತಿ ಬಸವಣ್ಣನ ಪ್ರೀತಿಯ ಮಗನಾದ ಬಾಲಸಂಗಯ್ಯನು ಸಹ ಬಸವಣ್ಣನಿಗಿಂತ ಮುಂಚೆಯೇ ಐಕ್ಯನಾಗಿದ್ದಾನೆ ಎಂಬುದನ್ನು ಗುರುತಿಸಬಹುದು. ಇನ್ನು ಮೊದಲನೇ ಅಂಕ ನಡೆಯುವುದು ಶಿಶಿರದಲ್ಲಿ, ಎರಡನೇ ಮತ್ತು ಮೂರನೇ ಅಂಕಗಳು ಚೈತ್ರಕ್ಕೆ ಮುನ್ನ ಹೀಗಾಗಿ ಮೊದಲನೇ ಮತ್ತು ಎರಡನೇ ಅಂಕಗಳ ನಡುವಿನ ಕಾಲಾವಧಿ ಸುಮಾರು ಎರಡು ತಿಂಗಳುಗಳ ಅಂತರವಿರುವುದನ್ನು ಗುರುತಿಸಬಹುದು.

ವರ್ಣಸಂಕರವನ್ನು ಮುಖ್ಯವಾಗಿಟ್ಟುಕೊಂಡು ಬಸವಣ್ಣನನ್ನು ತನ್ನ ಭಂಡಾರಿ ಸ್ಥಾನದಿಂದ ಕೆಳಗಿಳಿಸಿದಾಗ ಬಸವಣ್ಣ ನೇರವಾಗಿ ಕೂಡಲ ಸಂಗಮಕ್ಕೆ ಗಂಗಾಂಬಿಕೆ ಮತ್ತು ಇತರ ಶರಣರೊಂದಿಗೆ ಹೋಗಿ ನೆಲೆಸಿದ್ದಾನೆ. ಇತ್ತ ಕಲ್ಯಾಣದಲ್ಲಿರುವುದು ನೀಲಾಂಬಿಕೆ, ಚೆನ್ನಬಸವಣ್ಣ , ಅಕ್ಕನಾಗಮ್ಮ ಹಾಗೂ ಇತರೆ ಕೆಳಜಾತಿ ಸಮುದಾಯದಿಂದ ಬಂದ ಶಿವಶರಣರು ಮಾತ್ರ. ಅದರಲ್ಲೂ ಬಿಜ್ಜಳನ ಉಪಟಳ ತಡೆಯಲಾರದೆ ಚೆನ್ನಬಸವಣ್ಣನ ಜೊತೆ ಕೆಲವು ಶರಣರು ಉಳವಿ ಕ್ಷೇತ್ರದ ಕಡೆ ಹೊರಟರೆ ಮಡಿವಾಳ ಮಾಚೀದೇವನ ಜೊತೆ ಕೆಲವು ಶರಣರು ಕಲ್ಯಾಣದಲ್ಲಿಯೇ ನೆಲೆಸಿದ್ದು, ಈ ಕಲ್ಯಾಣ ಕ್ರಾಂತಿಗೆ ಕಾರಣರಾಗುತ್ತಾರೆ. ಇದು ಈ ನಾಟಕದ ಆರಂಭವಾದರೆ, ಇನ್ನು ಮುಕ್ತಾಯ ಬಿಜ್ಜಳನು ತನ್ನ ಸಾಮ್ರಾಜ್ಯದ ವಿಸ್ತಾರಕ್ಕಾಗಿ, ದಕ್ಷ ಆಡಳಿತದ ಒಳಿತಿಗಾಗಿ ಯಜ್ಞವನ್ನು ಕೈಗೊಂಡಿರುವುದನ್ನು ಸೂಚಿಸುತ್ತದೆ. ಈ ಯಜ್ಞದ ಸಮಯದಲ್ಲಿ ಅಂತರ್ಜಾತಿಯ ವಿವಾಹ

ನಡೆಸಿ ವರ್ಣ ಸಂಕರಕ್ಕೆ ಕಾರಣವಾದ ಹರಳಯ್ಯ, ಮದುವಯ್ಯ ಹಾಗೂ ಶೀಲವಂತರ ಕಣ್ಣುಗಳನ್ನು ಕೀಳಿಸಿ, ಕುದುರೆಯ ಕಾಲುಗಳಿಗೆ ಕಟ್ಟಿ ಎಳೆಸುವಂತಹ ದೃಶ್ಯ ದಲಿತ ಶರಣರನ್ನು ರಕ್ತದ ಕ್ರಾಂತಿಗೆ ಹಾಗೂ ಬಿಜ್ಜಳನ ಅಟ್ಟಹಾಸಕ್ಕೆ ಕೊನೆ ಹಾಕುವಂತೆ ಮಾಡಿದೆ. ಬಹುರೂಪಿ ಚೌಡಯ್ಯ, ನಗೆಯಮಾರಿತಂದೆ ಮತ್ತು ಕಲಕೇತಯ್ಯ ಈ ಮೂರು ಜನ ಬಿಜ್ಜಳನು ನಡೆಸುತ್ತಿರುವ ದಕ್ಷಬ್ರಹ್ಮನ ಯಜ್ಞ ಶಾಲೆಗೆ ವೀರಭದ್ರನ ವೇಶದಲ್ಲಿ ಬಂದು ವಿವಿಧ ವೀರಗಾಸೆಯ ನೃತ್ಯವನ್ನು ಮಾಡುತ್ತಾಳೆ.ಬಿಜ್ಜಳನ ಸುತ್ತ ಸುತ್ತುತ್ತ ಬಿಜ್ಜಳನನ್ನು ಕೊಲೆಗೈಯ್ಯುವ ಪ್ರಸಂಗ ನಿಜಕ್ಕೂ ಆಧುನಿಕತೆಯನ್ನು ಪುರಾಣದ ಜೊತೆ ಸಮರ್ಪಕವಾಗಿ ಜೋಡಿಸಿದಂತಿದೆ. ಇವರೆಲ್ಲರೂ ಈ ಯಜ್ಞ ಶಾಲೆಯನ್ನು ನಾಶ ಮಾಡಿದ ಸಂದರ್ಭದಲ್ಲಿ ಸಂತೋಷದಿಂದ ಕುಣಿಯುತ್ತಾ, ಹೊಸ ಸೃಷ್ಟಿಯ ಬಗ್ಗೆ ಮಾತಾಡಲು ತವಕಿಸಿ ಹೊರಟು ಹೋಗುತ್ತಾರೆ. ಇಲ್ಲಿಗೆ ಈ ನಾಟಕದ ಕಥೆಗೆ ತೆರೆಬೀಳುತ್ತದೆ. ಇದು ಈ ನಾಟಕದ ಒಟ್ಟಾರೆಯ ಕಥಾವಸ್ತು ಎಂದು ಮೇಲ್ನೋಟಕ್ಕೆ ಕಾಣಿಸುವಂತದ್ದು. ಆದರೆ, ವಿವಾದಕ್ಕೆ ಒಳಗಾಗುವಂತಹ ಯಾವುದೇ ವಿಚಾರ, ಹೇಳಿಕೆಗಳು ಇಲ್ಲಿ ಕಾಣಿಸುವುದಿಲ್ಲ. ಈ ನಾಟಕದ ಒಳಹೊಕ್ಕು ನೋಡಿದಾಗ ಮಾತ್ರ ವಿವಾದಕ್ಕೆ ಕಾರಣವಾದ ಅಂಶಗಳು ಕಾಣಿಸುವುದು. ಅಂತಹ ಅಂಶಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಮರು ವಿಶ್ಲೇಷಣೆಗೆ ಒಳಗು ಮಾಡಿದ್ದೇನೆ.

'' ನಾಟಕದ ಉದ್ದಕ್ಕೂ ಚೈತ್ರ ಹಾಗೂ ಶಿಶಿರಗಳ ಕಲ್ಪನೆ ಆವರ್ತನೆಗೊಳ್ಳುವುದರ ಮೂಲಕ ನಾಟಕದ ಆಶಯ ಹಾಗೂ ನಿಲುವುಗಳು ಖಚಿತಗೊಳ್ಳುತ್ತಾ ಬೆಳೆಯುತ್ತದೆ. ಬದುಕನ್ನು ನುಂಗುವ ಶಿಶಿರ ಬಿಜ್ಜಳನ ಕ್ರೌರ್ಯವನ್ನು ಸಂಕೇತಿಸಿದರೆ ಚೈತ್ರ ಹೊಸ ಬದುಕಿನ ಎಲ್ಲಾ ಸತ್ವಗಳನ್ನು ಪ್ರತಿನಿಧಿಸುತ್ತದೆ. ಕಲ್ಯಾಣದ ಆಶಯ ಯಾವುದೋ ಒಂದು ಕಾಲದಲ್ಲಿ ಮಾತ್ರ ಮೂಡಿ ಹೋದ ಆಶಯದ್ದಾಗಿರದೆ, ನಾಟಕದ ಮುಖ್ಯ ಘಟನೆಗಳ ಮೂಲಕ ಏರ್ಪಡುವ ಸಂಘರ್ಷದ ನೆಲೆಗಳನ್ನು ಕ್ರಿಯಾರೂಪವನ್ನು ಈ ನಾಟಕ ಸಮರ್ಥವಾಗಿ ಪ್ರತಿಬಿಂಬಿಸುತ್ತದೆ. ಹೀಗೆ ಸಾವಿಗೆ ಗುರಿಯಾಗುವ ಬಿಜ್ಜಳನಿಗೆ ಅಂತ್ಯ ಬರ್ಬರ ಶಿಶಿರದ ಕೊನೆಗೊಳ್ಳುವಿಕೆಯನ್ನು ನವಚೈತ್ರದ ಉದಯವನ್ನು ಅತ್ಯಂತ ಮಾರ್ಮಿಕವಾಗಿ ಪ್ರಕಟಿಸುತ್ತದೆ. ಈ ನಾಟಕ ಚರಿತ್ರೆ, ಪುರಾಣ, ದಂತಕತೆ ಹಾಗೂ ಜಾನಪದೀಯ ವಿವರಗಳನ್ನು, ಕ್ರಿಯಾತ್ಮಕವಾಗಿ ತನ್ನ ರಚನೆಯಲ್ಲಿ ಒಳಪಡಿಸಿಕೊಂಡಿದೆ. ವಚನಗಳು, ಕಾಲಜ್ಞಾನ, ತತ್ವ ಹಾಗೂ ಬೆಡಗಿನ ರಚನೆಗಳ ಸಾಮುಗ್ರಿ ಚಾರಿತ್ರಿಕ ನೆಲೆಯನ್ನು ಸಜೀವನ ಗೊಳಿಸುವುದರೊಂದಿಗೆ ಸಮಕಾಲೀನ ಕಂಪನಗಳನ್ನು, ಕ್ರಿಯೆಯನ್ನು ಜಾಗ್ರತಗೊಳಿಸುವುದರಲ್ಲಿ ಯಶಸ್ವಿಯಾಗಿದೆ '' ಎಂದು ವಿಮರ್ಶಕ ರೊಬ್ಬರು 'ಮುನ್ನುಡಿ'ಯಲ್ಲಿ ಪ್ರಸ್ತಾಪಿಸಿರುವುದನ್ನು ನೋಡಬಹುದು.

ಈ ನಾಟಕವು ನಿಜಕ್ಕೂ ಆಧುನಿಕ ಯುಗದಲ್ಲಿ ಒಂದು ರೀತಿಯ ಹೊಸ ಅಲೆಯನ್ನೇ ಸಮಾಜಕ್ಕೆ ನೀಡಿದಂತಿದೆ. ಅದರಂತೆ ನಾಟಕದ ಒಳಗೆ ಕೆಲವು ಅಸಂಗತ ಮಾಹಿತಿಗಳನ್ನು , ಹೇಳಿಕೆಗಳನ್ನು ನೀಡಿ ಜನಸಮುದಾಯದಲ್ಲಿ ದ್ವಂದ್ವ ನಿಲುವನ್ನು ಸೃಷ್ಟಿಸಿದ್ದಾರೆ. ಅದಕ್ಕಾಗಿಯೇ ಈ ನಾಟಕ ಕೃತಿಯನ್ನು ಪಠ್ಯ ಪುಸ್ತಕದಿಂದ ನಿಷೇಧಿಸಲಾಗಿದೆ ಎಂದು ಹೇಳಬಹುದು. ಈ ಕೃತಿಯ ನಿಷೇಧಕ್ಕೆ ಕಾರಣವಾದ ಮತ್ತು ವಿವಾದಗಳಲ್ಲಿ ಎತ್ತಲಾದ ಪ್ರಶ್ನೆಗಳನ್ನು ಗಮನದಲ್ಲಿಟ್ಟುಕೊಂಡು ಅವುಗಳನ್ನು ನಾನು ಇಲ್ಲಿ ಈ ಕೆಳಕಂಡಂತೆ ವಿಶ್ಲೇಷಿಸಲು ಪ್ರಯತ್ನಿಸಿದ್ದೇನೆ. ಇದು ನನ್ನ ಓದಿನ ಹಾಗೂ ನಾನು ಕಟ್ಟಿಕೊಂಡ ಒಂದು ಅಧ್ಯಯನದ ಕ್ರಮವೇ ಹೊರತು ಇದೇ ಅಂತಿಮ ವಿಶ್ಲೇಷಣೆಯಲ್ಲ ಎಂಬುದನ್ನು ಸಹ ಮನಗಂಡಿದ್ದೇನೆ. ಇಲ್ಲಿನ ಸರಿತಪ್ಪುಗಳನ್ನು ಎತ್ತಿತೋರಿಸುವ ಅಥವಾ ವಿಮರ್ಶಿಸುವಷ್ಟು ಶಕ್ತ ನಾನಲ್ಲ, ಆದರೂ ನನ್ನ ಅಧ್ಯಯನದ ದೃಷ್ಟಿಯಿಂದ ಮತ್ತು ನನ್ನ ಅಧ್ಯಯನದ ಶೀರ್ಷಿಕೆಗೆ ಒಳಪಡುವುದರಿಂದ ಈ ಕೆಳಕಂಡಂತೆ ಪ್ರಾಸಂಗಿಕವಾಗಿ ವಿಶ್ಲೇಷಣೆಗೆ ಒಳಗು ಮಾಡಿಕೊಂಡಿದ್ದೇನೆ.

ಪ್ರಮುಖವಾಗಿ 'ಮಹಾಚೈತ್ರ' ನಾಟಕವು ನಿಷೇಧಕ್ಕೆ ಕಾರಣವಾದ ಅಂಶಗಳನ್ನು ಹಾಗೂ ವಿವಾದಗಳಲ್ಲಿ ಪ್ರತಿಪಾದಿಸಲಾದ ಅಂಶಗಳನ್ನು ಈ ರೀತಿ ಗುರುತಿಸಬಹುದು.

ಅ) ಮಹಾಮನೆಯನ್ನು ಮತ್ತು ಶಿವಶರಣರನ್ನು ವ್ಯಂಗ್ಯ ಅಥವಾ ಅಶ್ಲೀಲವಾಗಿ ರಚಿಸಿದ್ದಾರೆ.

ಆ) ಅಕ್ಕ ನಾಗಮ್ಮನ ಶೀಲದ ಪ್ರಸ್ತಾಪ.

ಇ) ಸೂಳೆಸಂಕವ್ವ, ಅಕ್ಕಮಹಾದೇವಿ ಹಾಗೂ ಅಲ್ಲಮಪ್ರಭುವನ್ನು ಅಶ್ಲೀಲವಾಗಿ ಚಿತ್ರಿಸಿದ್ದಾರೆ.

ಈ) ಬಸವಣ್ಣನ ಚಾರಿತ್ರ್ಯವನ್ನು ತಿರುಚಿದ್ದಾರೆ.

ಉ) ನಾಟಕದಲ್ಲಿ ವೀರಶೈವರನ್ನು ಕಡೆಗಣಿಸಲಾಗಿದೆ ಮತ್ತು ಅವರನ್ನು ಅವಹೇಳನ ಮಾಡಲಾಗಿದೆ.

ಹೀಗೆ ಈ ಕೃತಿಯ ಮೇಲಿನ ಕೆಲವೊಂದು ದೋಷಾಯುಕ್ತ ಆರೋಪಗಳನ್ನು ಪಟ್ಟಿ ಮಾಡಬಹುದು. ದಲಿತರ ಮತ್ತು ಕೆಳ ಸಮುದಾಯ ಶರಣರಲ್ಲಿ ಆತ್ಮವಿಶ್ವಾಸ ಮೂಡಿಸಿ ಅವರಲ್ಲಿ ಸಮಕಾಲೀನ ಸಮಸ್ಯೆಯ ಹಲವು ಮುಖಗಳನ್ನು ನಾಟಕಕಾರ ಮಂಡಿಸುವ ರೀತಿ ಗಮನಾರ್ಹವಾಗಿದೆ. ಇತರ ನಾಟಕ ಕೃತಿಗಳಂತೆ ಇಲ್ಲಿಯೂ ಸಹ ಲೇಖಕರು ಪ್ರದರ್ಶನಕ್ಕೆ ಅನುಗುಣವಾಗಿ ನಾಟಕವನ್ನು ವಿಭಾಗಿಸಿಕೊಂಡಿದ್ದಾರೆ. ಮೂರು ಅಂಕಗಳಿಂದ ಕೂಡಿರುವ

ಈ ನಾಟಕ ಕೃತಿಯು ಒಟ್ಟು ೧೪ ದೃಶ್ಯಗಳನ್ನು ಒಳಗೊಂಡಿದೆ. ಸುಮಾರು ೭೫ ಪುಟದಷ್ಟು ದೀರ್ಘವಾದ ಕಥಾವಸ್ತುವಿದ್ದು, ಗಾತ್ರದ ಸಂಖ್ಯೆಯಲ್ಲಿ ಚಿಕ್ಕದಾದರೂ ಪಾತ್ರಗಳ ಸಂಖ್ಯೆಯಲ್ಲಿ ದೊಡ್ಡದೇ ಆಗಿದೆ. ಆದರೂ ನಾಟಕದ ಕಥೆಗೆ ಒಂದು ಚೌಕಟ್ಟನ್ನು ಲೇಖಕರು ನಿರ್ಮಿಸಿದ್ದಾರೆ. ಇಲ್ಲಿ ಯಾವುದೇ ರೀತಿಯು ಆಡಂಬರವಾಗಲಿ, ಅಥವಾ ವೈಭವೀಕರಣವಾಗಲೀ ಕಂಡುಬರುವುದಿಲ್ಲ. ಈ ಕೃತಿಯಲ್ಲಿ ಲೇಖಕರು ಹೆಚ್ಚಾಗಿ ಕಲಾತ್ಮಕತೆಗೆ ಒತ್ತು ಕೊಟ್ಟಿದ್ದಾರೆ ಎಂದು ಹೇಳಬಹುದು. ಮೊದಲ ಎರಡು ಅಂಕಗಳಲ್ಲಿ ಮಾತ್ರ ಇತಿಹಾಸವನ್ನು ತಿರುಚಿದ್ದಾರೆ ಎನ್ನಲಾಗುವ ಪದಪ್ರಯೋಗಗಳನ್ನು ಗುರುತಿಸಬಹುದಾಗಿದ್ದು, ಇನ್ನು ಉಳಿದಂತೆ ನಾಟಕದ ಕಥೆ, ಪಾತ್ರಗಳ ಜೋಡಣೆ, ಪಾತ್ರಗಳ ಸಂಭಾಷಣೆ ಹಾಗೂ ನಿರೂಪಣೆ ಎಲ್ಲವೂ ಯಶಸ್ವಿಯಾಗಿ ಚಿತ್ರಿತಗೊಂಡಿದೆ.

**೧. ಮಹಾಮನೆ ಹಾಗೂ ಶಿವಶರಣರ ಪ್ರಸ್ತಾಪ :**

ಇಲ್ಲಿ ಬಸವಣ್ಣನ ತತ್ವಗಳನ್ನು ಅಳವಡಿಸಿಕೊಂಡು ಆ ನೆಲೆಯಲ್ಲಿ ನಡೆಯಬೇಕಾದ ಶರಣರಲ್ಲಿಯೇ ಒಡಕು ಮೂಡಿ ಬಸವಣ್ಣನು ಕಟ್ಟಿದ ಕನಸನ್ನು ಒಡೆದು ಆಳುವ ನೀತಿ -ರೀತಿಗಳನ್ನು ಇಲ್ಲಿ ನೋಡಬಹುದು.

> ''ಚನ್ನಬಸವಣ್ಣ : ನಿಮ್ಮ ಆವೇಶ ಅರ್ಥವಾಗುತ್ತೆ ಮಾಚಿದೇವರೇ
> ಈ ಪ್ರಪಂಚ ಒಂದು ಘೋರ ಕಾನನ .....................
> ಆದರೂ ಅಹಿಂಸೆ ನಮ್ಮ ಪರಮ ಧರ್ಮವಾಗಬೇಕು ಇಲ್ಲವಾದರೆ
> ಬಸವೋಕ್ತಿಯ ಉಲ್ಲಂಘನೆಯಾಗುತ್ತದೆ.
> ಮಾಚಿದೇವ : ನಾವು ಬಸವಣ್ಣನ್ನೋರ ಬಿಟ್ಟ ಆಳುಗಳಲ್ಲ.
> ಚನ್ನ ಬಸವಣ್ಣ : ಬಸವಣ್ಣನ್ನೋರು ನಮ್ಮ ಅಗ್ರ ನಾಯಕರು
> ಮಾಚಿದೇವ : ನಮಗೆ ಅದು ಮುಖ್ಯವಲ್ಲ, ಈ ಮಹಾಮನೆ ಕಟ್ಟಿದ್ದು
> ನಾವು. ನಾವೇ ಒಂದು ಕಿರುದಾರಿ ಹುಡುಕುತ್ತಾ ಇದ್ದೆವು,
> ....................................................
> .................................. ಆ ದಾರಿ
> ಹಿಡಿದು ಮುಂದೆ ಬಂದಾಗ ನಾವು ಈ ಜಾತಿ ಬಿಟ್ಟ ಮದುವೆ ಮನೆಗೆ ತಲುಪಿದೆವು''
> (ಪುಟ : ೧೦)

ಎಂದು ಮಾಚಿದೇವ ಚನ್ನಬಸವಣ್ಣನೊಂದಿಗೆ ಚರ್ಚಿಸುವಾಗ ಇಲ್ಲಿ ಬಸವಣ್ಣನ ತತ್ವಗಳನ್ನು ಕಡೆಗಣಿಸಿ, ಬಸವಣ್ಣನ ತತ್ವಗಳಿಗೆ ಪ್ರಾಧಾನ್ಯತೆ ಕೊಡದೆ ನಾವೇನು

ಬಸವಣ್ಣನೋರ ಬಿಟ್ಟಿ ಆಳುಗಳಲ್ಲ ಎಂದು ಒಬ್ಬ ಹಿರಿಯ ಶರಣನಿಂದ ಹೇಳಿಸಿರುವುದು ಸರಿ ಎನಿಸುವುದಿಲ್ಲ. ಮಹಾಮನೆಯಲ್ಲಿನ ಪ್ರತಿಯೊಂದು ಕೆಲಸಕ್ಕೂ ಅಗ್ರಗಣ್ಯನಾದವನು ಹಾಗೂ ನಾಯಕ ಬಸವಣ್ಣನೇ ಆಗಿದ್ದಾನೆ. ಆದರೆ ಇಲ್ಲಿ ಮಾಚಿದೇವ ನಾಯಕನನ್ನೇ ಜರೆದಂತಿದೆ. ಅಷ್ಟೇ ಅಲ್ಲದೆ ಮಹಾಮನೆ ಕಟ್ಟಿದ್ದು ನಾವು ಎಂದಾಗ ಇತಿಹಾಸವನ್ನೇ ಬದಲಿಸಿದಂತಾಗುತ್ತದೆ. ಶತಶತಮಾನಗಳಿಂದಲೂ ಶಾಸನಾಧಾರಗಳಿಂದ, ಸಾಹಿತ್ಯಾಧಾರಗಳಿಂದ ತಿಳಿದುಬಂದಿರುವಂತೆ ಮಹಾಮನೆಯ ನಿರ್ಮಾತೃ ಬಸವಣ್ಣ, ಮಾಚಿದೇವ ನಾವು ಎಂದು ಹೇಳಿದಾಗ ಇತಿಹಾಸವನ್ನು ಹೊಸದಾಗಿ ಬರೆದಂತಾಗುತ್ತದೆ. ಆಗ ಅದಕ್ಕೆ ಬೇಕಾದ ದಾಖಲೆಗಳನ್ನು ನೀಡಬೇಕಾಗುತ್ತದೆ. ಇಂತಹ ವಿಚಾರಗಳು ಮುಂದಿನ ತಲೆಮಾರಿನ ಯುವ ಜನತೆಯ ಮೇಲೆ ಮತ್ತು ಸಂಶೋಧಕರ ಮೇಲೆ ಪರಿಣಾಮ ಬೀರುತ್ತದೆ. ಮೊದಲೇ ಬಸವಾದಿ ಶರಣರ ಬಗೆಗೆ ನಿರ್ದಿಷ್ಟವಾದ, ಸ್ಪಷ್ಟವಾದ ದಾಖಲೆಗಳಿಲ್ಲದೆ ಇಂತಹ ಸಮಯದಲ್ಲಿ ಮತ್ತಷ್ಟು ಊಹಾಪೋಹಗಳ ಕಂತೆಯನ್ನು ಸೃಷ್ಟಿಸಿ ಜನಸಮುದಾಯವನ್ನು ದ್ವಂದ್ವತೆಯಲ್ಲಿ ತಳ್ಳಬಾರದಾಗಿದೆ. ಇಂತಹ ವಿಚಾರಗಳನ್ನು ಗಮನಿಸಿಯೇ ಮಠಾಧೀಶರುಗಳು, ಸಂಘ -ಸಂಸ್ಥೆಯ ಅನುಯಾಯಿಗಳು ಇತಿಹಾಸವನ್ನು ತಿರುಚಲಾಗಿರುವ ಪದ ಪ್ರಯೋಗಗಳಿವೆ ಎಂದಿರುವುದು.

''......... ನಾವು ಶರಣರ ಮದುವೆ ಮನೆಗೆ ಬಂದು ತಲುಪಿದೆವು'' ಎಂದು ಲೇಖಕರು ಒಬ್ಬ ಹಿರಿಯ ದಲಿತ ಶರಣನಿಂದ ಹೇಳಿಸಬಹುದಿತ್ತು. ಆದರೆ ಲೇಖಕರಿಗೆ ಒಬ್ಬ ದಲಿತ ಶರಣನಿಂದ ಶರಣರ ಮದುವೆಗೆ ತಲುಪಿದೆನು ಎಂದು ಹೇಳಿಸುವಾಗ ಅವರಿಗೇ ಎಲ್ಲೋ ಒಂದು ಕಡೆ ಅವಮಾನವೆಂದೆನಿಸಿರಬೇಕು ಎಂದು ಹೇಳಬಹುದು. ಹಾಗೆಯೇ ಚನ್ನಬಸವಣ್ಣ ಮತ್ತು ಮಾಚಿದೇವರಲ್ಲಿ ಭಿನ್ನಾಭಿಪ್ರಾಯ ಮೂಡಿ ಬಸವಣ್ಣನು ಕಟ್ಟಿದ ವೀರಶೈವ ಧರ್ಮವನ್ನು ಈ ಇಬ್ಬರು ಮಹಾನ್ ನಾಯಕರು ಒಡೆದು ಹಂಚಿಕೊಂಡು ತಮ್ಮ ತಮ್ಮನ್ನು ಓಲೈಸುವ ನಾಯಕರುಗಳನ್ನು ಎರಡು ಗುಂಪುಗಳಾಗಿ ಮಾಡಿಕೊಂಡಂತೆ ಚಿತ್ರಿಸಿರುವುದನ್ನು ನೋಡಬಹುದು.

ಈ ನಾಟಕದಲ್ಲಿ ದಲಿತರು, ಅಸ್ಪೃಶ್ಯರು ಮತ್ತು ಸಮಾಜದಲ್ಲಿ ಸಂಪ್ರದಾಯವಾದಿಗಳ ತುಳಿತಕ್ಕೆ ಸಿಲುಕಿದವರೇ ನಾಯಕರಾಗಿ ನಟಿಸಿದ್ದಾರೆ. ಮತ್ತು ಅವರಿಗೇ ಲೇಖಕರು ಈ ಕೃತಿಯನ್ನು ಅರ್ಪಣೆ ಮಾಡಿದ್ದಾರೆ. ಇಲ್ಲಿ ಇವರ ಆಧುನಿಕತೆಯನ್ನು ಪ್ರತಿಬಿಂಬಿಸುತ್ತದೆ. ಆದರೂ ಕೆಲವೊಂದೊಂದು ಕಡೆ ದಾರಿ ತಪ್ಪಿದ್ದಾರೆ. ನಾಟಕದ ಒಳ ಪಾತ್ರಗಳು ಶರಣರನ್ನು ಮಹಾಮನೆಯನ್ನು ವಿಡಂಬಿಸಿರುವ ದೃಶ್ಯಗಳು ಹಲವು. ಅವುಗಳಲ್ಲಿ ಒಂದು ಹೀಗಿದೆ.

''ಜಂಗಮ ೧ : ತಿರುಕನ ಕನಸಿನ ಹಾಗಾಯ್ತಲ್ಲಪ್ಪ ಈ ತಿರುಬೋಕಿಗಳ ಮಹಾಮನೆ.

ಜಂಗಮ ೨ : ಚರ್ಚೆ ಮಾಡಿದ್ದೂ ಮಾಡಿದ್ದೆ. ಇವರ ವಂಶ ನಾಶವಾಗ.

ಜಂಗಮ ೧ : ಆ ಬಸವಣ್ಣನೇ ಸರಿ. ಅವನಿದ್ದಿದ್ದರೆ ಆದೇನು ಉಪಚಾರ.

ಜಂಗಮ ೨ : ಯಾರ ತೀಟೆಗೆ ಉಪಚಾರ ಮಾಡ್ತಿದ್ದ ? ನಮ್ಮ ಸೇವೆ ಮಾಡಿದ್ದು ಅಂದರೆ ಅವನ ಹದಿನಾಲ್ಕು ಜನ್ಮಗಳ ಪುಣ್ಯ.'' ( ಪುಟ : ೧೩)

ಇಲ್ಲಿ 'ಶರಣ' ಮತ್ತು 'ಜಂಗಮ'ಕ್ಕೆ ವ್ಯತ್ಯಾಸವಿದ್ದು , ಇದೇ ಒಂದು ರೀತಿಯ ದ್ವಂದ್ವತೆಯಿಂದ ಕೂಡಿದೆ. ಇಲ್ಲಿ 'ಜಂಗಮ' ವೈದಿಕ ಧರ್ಮದ ಅನುಯಾಯಿಯಾಗಿದ್ದು ಬಸವಣ್ಣನು ಕೂಡಲ ಸಂಗಮಕ್ಕೆ ಹೊರಟ ನಂತರದಲ್ಲಿ ತನ್ನ ಶರಣತ್ವವನ್ನು ಕಳಚಿ ಬ್ರಾಹ್ಮಣೀಕರಣಗೊಂಡಿದ್ದಾನೆ ಎನ್ನುವಂತೆ ಇದೆ. ಅಷ್ಟೇ ಅಲ್ಲದೆ ಇಲ್ಲಿ ಶರಣರನ್ನು ಜಂಗಮರ ಮೂಲಕವೇ ತಿರುಬೋಕಿಗಳು, ಹಂದಿಗಳು, ನಾಯಿಗಳು, ಜಾತಿಗೆಟ್ಟೋರು ಎಂದು ಕರೆಯಿಸಿರುವುದು ಶರಣರನ್ನು ಇಲ್ಲಿ ಅವಮಾನಿಸಿದಂತೆಯೇ ಆಗಿದೆ. ''ಬಸವಣ್ಣ ಯಾರ ತೀಟೆಗೆ ಉಪಚಾರ ಮಾಡ್ತಿದ್ದ ? '' ಎನ್ನುವಲ್ಲಿ ವಿಡಂಬನೆ ಎದ್ದು ಕಾಣುತ್ತದೆ. ಯಾರ ಪರವಾಗಿ ನಿಂತು ಅವರ ಧ್ವನಿಗೆ ತನ್ನ ಧ್ವನಿ ಸೇರಿಸಿ ಇಡೀ ಬದುಕನ್ನೇ ಅರ್ಪಿಸಿದನೋ ಅವರೇ ಇಂದು ಬಸವಣ್ಣನನ್ನು ತಿರಸ್ಕಾರ, ಅಶ್ಲೀಲ..... ಮನೋಭಾವದಿಂದ ನೋಡುತ್ತಿರುವುದು. ಇದು ಸಾಮಾಜಿಕ ಕ್ರಾಂತಿ ಮಾಡಿದ ಒಬ್ಬ ಧಾರ್ಮಿಕ ಪುರುಷನಿಗೆ ನಾವು ಮಾಡುತ್ತಿರುವ ಅವಮಾನವೇ ಎಂದು ಹೇಳಬಹುದು.

ಯಾವ ಮನಸ್ಸಿನಿಂದ ತಾನು ಹುಟ್ಟಿದ ಜಾತಿ, ಧರ್ಮವನ್ನೇ ತಿರಸ್ಕರಿಸಿದನೋ ಅವರೇ ಇಂದು ಬಸವಣ್ಣನನ್ನು ಓಲೈಸಿ ತಮ್ಮ ಜಾತಿಯ, ಧರ್ಮದ ನಾಯಕನನ್ನಾಗಿ ಮಾಡಿಕೊಂಡು, ಜಾತಿಯ, ಧರ್ಮದ ಸಂಕೋಲೆಯಲ್ಲಿ ಬಂಧಿಸಿದ್ದಾರೆ ಎಂಬುದನ್ನು ಗಮನಿಸಬಹುದು. ಸಾಮಾಜಿಕ, ಧಾರ್ಮಿಕ ಪುರುಷರನ್ನು ಜಾತಿ, ಧರ್ಮ ಹಾಗೂ ಪಂಗಡಗಳಿಂದ ಬಿಡಿಸಬೇಕಾದ ನಾಯಕರೇ ಅವರನ್ನು ಬಂಧನಗಳಿಗೆ ಒಳಪಡಿಸುತ್ತಿರುವುದು ಇವತ್ತಿನ ವೀರಶೈವರು ಮಾತ್ರವಲ್ಲ, ಪ್ರತಿಯೊಂದು ಧರ್ಮದವರೂ ಆಗಿದ್ದಾರೆ. ಶರಣರನ್ನು ಬ್ರಾಹ್ಮಣರು ಮತ್ತು ಜಂಗಮರು ಒಳಪಾತ್ರಗಳಲ್ಲಿ ಪದೇ ಪದೇ ಕುಲಗೆಟ್ಟವರು, ನೀತಿಗೆಟ್ಟವರು, ಜಾತಿಗೆಟ್ಟವರು ಎಂದು ಕರೆಸಿರುವಂತಹ ಪದ ಪ್ರಯೋಗಗಳನ್ನು ಒಂದು ಸೃಜನಶೀಲ ಸಾಹಿತ್ಯ ಕೃತಿಯಲ್ಲಿ ಬಳಸಬಾರದು ಎಂಬುದನ್ನು ''ಸಮಾಜ ಜಾತಿ ಬಿಟ್ಟವರನ್ನು ಕುಲಗೆಟ್ಟವರು ಎಂದು ಕರೆಯುತ್ತದೆ. ಕುಲಗೆಟ್ಟವರು ಎಂಬುದಕ್ಕೆ ಅಂತರ್ಜಾತಿ ವಿವಾಹವಾದವರು ಎಂಬ ಅರ್ಥವಿದೆ. ಆದ್ದರಿಂದ ಈ ಶಬ್ಧಗಳನ್ನು ಬಳಸಬಾರದು '' ಎಂದು ಡಾ. ಸಿದ್ದಲಿಂಗಯ್ಯ ಅವರು (ಮೊಗಳ್ಳಿ ಗಣೇಶ

ಸಂ.: ದಲಿತ ಚಿಂತನೆ, ಕ.ವಿ.ವಿ. ಹಂಪಿ ೨೦೦೭, ಪುಟ :೮೦) ಹೇಳುತ್ತಾರೆ.

ಅಂದಿನ ಸಮಾಜದಲ್ಲಿ ಬೇರು ಬಿಟ್ಟಿದ್ದ ಬ್ರಾಹ್ಮಣತ್ವದಿಂದ ಬಿಡಿಸಿಕೊಳ್ಳಲಾಗದ ಒಬ್ಬ ದೊರೆಯೇ ಅವರ ಅದೀನದಲ್ಲಿರುವಾಗ ಇನ್ನು ಒಬ್ಬ ಸಾಮಾನ್ಯ ಬಸವಣ್ಣನು ಅವರ ಬಂಧನದಿಂದ ಬಿಡಿಸಿಕೊಳ್ಳಲು ಸಾಧ್ಯವಿತ್ತೆ ? ಎಂಬುದನ್ನು ದೃಶ್ಯ ೭ ರಲ್ಲಿ ಬಿಜ್ಜಳನು ತನ್ನ ಸಾಕು ತಂಗಿ ನೀಲಾಂಬಿಕೆಗೆ "ಈ ಕುಹಕ ಕಪಟಗಳ ಮಧ್ಯೆ ಬದುಕುತ್ತಿರುವ ನನ್ನನ್ನು , ನಿನ್ನ ಗಂಡ ಒಂದೇ ಒಂದು ದಿವಸ ಚಕ್ರವರ್ತಿಯಾಗಿದ್ದರೆ ಗೊತ್ತಾಗುತ್ತಿತ್ತು. ಅವನ ಬೋಧನೆಗಳು ಎಷ್ಟು ನಿರರ್ಥಕವೆಂದು " ಎಂದು ನೀಲಾಂಬಿಕೆಗೆ ಮಾತ್ರ ಇಲ್ಲಿ ಬಿಜ್ಜಳ ಹೇಳುತ್ತಿಲ್ಲ. ನಾಟಕವನ್ನು ನೋಡುವ ಮತ್ತು ಓದುವ ಪ್ರತಿಯೊಬ್ಬರಿಗೂ ಅರ್ಥವಾಗುವಂತೆ ಅಂದಿನ ಸಮಾಜದಲ್ಲಿದ್ದ ಪುರೋಹಿತಶಾಹಿತ್ವ ಗುಣಗಳನ್ನು ಬಿಜ್ಜಳನ ಪಾತ್ರದ ಮೂಲಕ ಇಂದಿನ ಸಮಾಜದ ಜನತೆಗೆ ಲೇಖಕರು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ.

**೨. ಅಕ್ಕ ನಾಗಮ್ಮನ ಶೀಲದ ಪ್ರಸ್ತಾಪ :**

ಅಕ್ಕನಾಗಮ್ಮನ ಗಂಡ 'ಶಿವಸ್ವಾಮಿ' ಎಂಬುದಕ್ಕೆ ಸಿಂಗಿರಾಜನ 'ಸಿಂಗಿರಾಜ ಪುರಾಣ'ದಲ್ಲಿ ಬಹಳ ದೀರ್ಘವಾದ ಉಲ್ಲೇಖಗಳು ಕಂಡುಬರುತ್ತವೆ. ಆದರೂ ಸಹ ಇಂತಹ ವಿಚಾರದ ಬಗೆಗೆ ಇನ್ನೂ ಅಧ್ಯಯನ ನಡೆಯದ ಈ ಹೊತ್ತಿನಲ್ಲಿ ಅಥವಾ ಬಹುಮಂದಿ ನೋಡುವ ಈ ನಾಟಕ ಸಾಹಿತ್ಯ ಪ್ರಕಾರದಲ್ಲಿ 'ಅಕ್ಕ ನಾಗಮ್ಮ ನೀತಿಗೆಟ್ಟವಳು' (ಪುಟ : ೧೫) ಎಂದು ಪ್ರಸ್ತಾಪಿಸುವಾಗ ಲೇಖಕರು ಬಹಳ ಎಚ್ಚರಿಕೆಯಿಂದ ಈ ಪದವನ್ನು ಬಳಸಬೇಕಾಗಿತ್ತು. ಅಕ್ಕ ನಾಗಮ್ಮನ ಗಂಡನ ಹೆಸರು ನಮಗೆ ಯಾವುದೇ ಶಾಸನೇತರ ಸಾಹಿತ್ಯ ಕೃತಿಗಳಲ್ಲಿ ಸಿಗದೇ ಇರಬಹುದು. ಹಾಗೆಂದ ಮಾತ್ರಕ್ಕೆ ಅವಳಿಗೆ ಗಂಡನೇ ಇರಲಿಲ್ಲವೆಂದು ಹೇಳಲು ಬರುವುದಿಲ್ಲ.

ಮುಟ್ಟುಗೋಲಾದ ಈ ಮೂರೂ ಕೃತಿಗಳಲ್ಲಿ ಈ ವಿಚಾರವನ್ನು ನೋಡಬಹುದು. ಹಾಗೆಯೇ ಈ ವಿಚಾರವನ್ನು ಎಲ್ಲಾ ವಿದ್ವಾಂಸರು, ಸಂಶೋಧಕರು ತಮ್ಮ ತಮ್ಮ ಕೃತಿಗಳಲ್ಲಿ ಒಂದೊಂದು ರೀತಿ ವಿವರಣೆ ನೀಡುತ್ತಾರೆಯೇ ವಿನಃ ಅಲ್ಲೆಲ್ಲೂ ಸಹ ಅಕ್ಕ ನಾಗಮ್ಮನ ಗಂಡನ ಪ್ರಸ್ತಾಪವನ್ನೇ ಮಾಡುವುದಿಲ್ಲ. ಇದಕ್ಕೆ ಕಾರಣಗಳೇನು ಇರಬಹುದು? ಎಂಬುದು ಇಂದಿನ ಯುವ ಜನತೆಯನ್ನು ಕಾಡುತ್ತಿವೆ. ಈ ವಿಚಾರವಾಗಿ ಮುಂದಿನ ಅಧ್ಯಾಯದಲ್ಲಿ ದೀರ್ಘವಾಗಿ ವಿಶ್ಲೇಷಣೆಗೆ ಒಳಪಡಿಸಿದ್ದೇನೆ. ಅದೇ ರೀತಿ ಮಹಾಮನೆಯನ್ನು ಬಿಜ್ಜಳ "ಕೀಳು ಜಾತಿಯವರಿಂದ ತುಂಬಿದ ಮಹಾಮನೆ ಎಲ್ಲರ ತವರೇನು?" ಎಂದು

ಶರಣಗೋಷ್ಠಿ ನಡೆಸುತ್ತಿದ್ದಂತಹ ಆ ಮಹಾಮನೆಯಲ್ಲಿನ ಶರಣರನ್ನು ಹೀಗೆ ಕರೆಯಬಾರದಾಗಿತ್ತು ಎನ್ನಿಸುತ್ತದೆ. ಹೀಗೆ ಪುಟ : ೧೪, ೧೫ ಮತ್ತು ೫೨ ರಲ್ಲಿ ಮಹಾ ಮನೆಯ ಪ್ರಸ್ತಾಪವನ್ನು ಪದೇ ಪದೇ ಅಲ್ಲಿ ನೆರೆದವರೆಲ್ಲಾ ನೀತಿಗೆಟ್ಟವರು, ಕುಲಗೆಟ್ಟವರು ಎಂದು ಪ್ರಸ್ತಾಪಿಸಿರುವುದು ಕಾಣಿಸುತ್ತದೆ. ಇದೇ ರೀತಿ ಅಕ್ಕ ನಾಗಮ್ಮನ ಶೀಲವನ್ನು ಶಂಕಿಸಿ ಬರೆಯಲಾದ 'ಧರ್ಮಕಾರಣ' ಕಾದಂಬರಿ ಮತ್ತು 'ಆನುದೇವಾ ಹೊರಗಣವನು' ಪ್ರಬಂಧವು ಸಹ ಮುಟ್ಟುಗೋಲಾಗಿರುವುದನ್ನು ನೋಡಬಹುದು. ಅಕ್ಕ ನಾಗಮ್ಮನ ಗಂಡ ಶಿವಸ್ವಾಮಿ ಎಂಬುದಕ್ಕೆ ನಮಗೆ ಸಾಕಷ್ಟು ಪುರಾವೆಗಳನ್ನು ನೀಡಿದವರಲ್ಲಿ ಪ್ರಮುಖರಾದವರೆಂದರೆ ಅನ್ನದಾನಯ್ಯ ಪುರಾಣಿಕರು (ನೋಡಿ :ಷಟ್‌ಸ್ಥಲ ಚನ್ನಬಸವಣ್ಣ ಬಸವ ಸಮಿತಿ, ಬೆಂಗಳೂರು, ದ್ವಿತೀಯ ಮು. ೧೯೯೯).

ಮೇಲ್ವರ್ಗದ ಅಧಿಕಾರಿಗಳು ತಮ್ಮನ್ನು ತಾವು ಶ್ರೇಷ್ಠ ಕುಲದವರು, ಜಾತಿಯವರು ಎಂದು ಕರೆದುಕೊಂಡು ಕೆಳವರ್ಗದ ಜನತೆಯನ್ನು ತಮ್ಮ ದರ್ಪ, ದೌರ್ಜನ್ಯಗಳಿಗೆ ಒಳಪಡಿಸಿಕೊಂಡಿದ್ದಾರೆ ಎಂದು ಹೇಳುವ ಬಸವಣ್ಣನೇ ತನ್ನ ವಚನಗಳಲ್ಲಿ ಅಂದಿನ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಅಂಶಗಳನ್ನು ಕಟ್ಟಿಕೊಟ್ಟಿದ್ದಾನೆ. ಹುಟ್ಟು ಜಾತಿ, ಕುಲದ ಬಗ್ಗೆ ಬೇಸತ್ತ ಬಸವಣ್ಣನು ''ಈ ವಿಪ್ರರು ಮಾತು ಮಾತಿಗೆ ಜಾತಿ, ಜಾತಿ ಎನ್ನುತ್ತಾರೆ. ಯೋನಿಯಲ್ಲಲ್ಲದೆ ಕರ್ಣದಲಿ ಜನಿಸಿದವರುಂಟೆ ಈ ಲೋಕದಲಿ '' ಎಂದು ಹೇಳುವ ಬಸವಣ್ಣ ಹಾಗಾದರೆ ಜಾತಿಯೇಕೆ ? ಈ ಭೂಮಿಯಲ್ಲಿ ಎಂದು ತನ್ನನ್ನೇ ತಾನು ಪ್ರಶ್ನಿಸಿಕೊಂಡಿದ್ದಾನೆ. 'ತನ್ನ ತಾ ಅರಿತಂಗೆ ಕುಲವಿಲ್ಲ , ಜಾತಿಯಿಲ್ಲ' ಎಂದು ಹೇಳಿರುವುದಲ್ಲದೆ, ಎಲ್ಲರಿಗೂ ಒಂದೇ ಆಗಿರುವ ಈ ನೆಲ, ಜಲಗಳನ್ನು ತಿಳಿಸಿದ್ದಾನೆ. ಇಲ್ಲಿ ಶರಣರಿಗೆ ಜಾತಿಯಿಲ್ಲ, ಕುಲವಿಲ್ಲ , ಅವರವರ ವೃತ್ತಿಗನುಗುಣವಾಗಿ ಅವರನ್ನು ಗುರುತಿಸಿಕೊಂಡಿದ್ದಾರೆ ಎಂದು ಬಸವಣ್ಣನೇ ವಚನಗಳಲ್ಲಿ ಹೇಳಿಕೊಂಡಿರುವಾಗ ಸಾಮಾಜಿಕ ಪ್ರಗತಿಪರ ಚಿಂತಕರಾದ ಲೇಖಕರು ಮತ್ತೆ ಮತ್ತೆ ಯಾಕೆ ಅವರ ಜಾತಿ, ಕುಲ ಮತ್ತು ಜನನವನ್ನು ಹುಡುಕಲು ಹೊರಟಿರುವುದು ?

**೩. ಸೂಳೆ ಸಂಕವ್ವ-ಅಕ್ಕ ಮಹಾದೇವಿ-ಅಲ್ಲಮಪ್ರಭು :**

೧೨ ನೇ ಶತಮಾನದಲ್ಲಿಯೇ ಸ್ತ್ರೀಯರಿಗೆ ಮೊದಲು ಸಾಮಾಜಿಕ ಅಭಿವ್ಯಕ್ತಿ ಸ್ವಾತಂತ್ರ್ಯ ದೊರಕಿಸಿಕೊಟ್ಟವರು ಎಂದರೆ ಬಸವಣ್ಣನವರು. ಇವರು ತಮ್ಮ ವಚನ ಮಂಟಪದಲ್ಲಿ ನಡೆಯುತ್ತಿದ್ದ ವಿದ್ವತ್ಪೂರ್ಣವಾದ ಚರ್ಚೆಗಳಲ್ಲಿ ಭಾಗವಹಿಸಲು ಸ್ತ್ರೀಯರಿಗೂ ಪುರುಷನಷ್ಟೇ ಸ್ಥಾನಮಾನವನ್ನು ನೀಡಿ ಅವರನ್ನು ಗೌರವಿಸಿದವನು. ಇಂದಿನ

ಈ ಸಮಾಜದಲ್ಲಿ ಸ್ತ್ರೀಯರು ಈ ಮಟ್ಟಿನ ಸ್ಥಾನವನ್ನು ಪಡೆಯಲು ಅಂದಿನ ವಚನಕಾರ್ತಿಯರು ಮತ್ತು ಬಸವಾದಿ ಶರಣರು ಎಂದು ಹೇಳಿದರೆ ತಪ್ಪಾಗಲಾರದು. ಅಂದಿನ ಸಂಪ್ರದಾಯವಾದಿ ಮನೆತನದಲ್ಲಿ ಜನಿಸಿದ್ದರೂ ಸಹ ದಲಿತನಿಗಿಂತಲೂ ಸ್ತ್ರೀಯರನ್ನು ಕಡೆಗಣಿಸಲಾಗಿತ್ತು. ಅಂತಹ ಸಂದರ್ಭದಲ್ಲಿ ಅಕ್ಕ ಮಹಾದೇವಿ, ನಾಗಮ್ಮ, ಸೂಳೆ ಸಂಕವ್ವ, ಕಲ್ಯಾಣಮ್ಮ, ಗಂಗಾಂಬಿಕೆ, ನೀಲಾಂಬಿಕೆ ಇನ್ನೂ ಮುಂತಾದ ವಚನಕಾರ್ತಿಯರು ಪಟ್ಟಿರುವ ಕಷ್ಟ ಅಷ್ಟಿಷ್ಟಲ್ಲ. ಅಂತಹವರನ್ನು ಇಂದು ನಾವು ಸಾಹಿತ್ಯ ಕೃತಿಗಳಲ್ಲಿ ಅಶ್ಲೀಲವೆನ್ನುವಂತೆ, ವ್ಯಂಗ್ಯ ಮಾಡುವುದು ಸಮಾಜದ ದೃಷ್ಟಿಯಿಂದ ಸರಿಯಲ್ಲ ಎನಿಸುತ್ತದೆ. ಈ ನಾಟಕದ ಒಂದು ಕಡೆ ಸೂಳೆ ಸಂಕವ್ವಳನ್ನು ಮತ್ತು ಮಹಾದೇವಿಯನ್ನು ಕುರಿತು ಮಾಡಿರುವ ಒಂದು ಪ್ರಸ್ತಾಪ ಹೀಗಿದೆ. ''ಅವಳ್ಯಾರೋ ಸಂಕವ್ವ ಅನ್ನೋ ಸೂಳೆ, ಅದೆ ಅವಳಿಗೂ ನಮ್ಮ ಹಿಂದಿನ ವಣಿಕ ಮಂಡಳಿ ಅಧ್ಯಕ್ಷರಿಗೂ......ಹ್ಹಿ ಹ್ಹಿ ಹ್ಹಿ ಗೊತ್ತಲ್ಲ......'' ಇಲ್ಲಿ ಬಸವಣ್ಣ ಸೂಳೆ ಸಂಕವ್ವಳಿಗೆ ಲಿಂಗದೀಕ್ಷೆ ನೀಡಿ ಶರಣೆಯನ್ನಾಗಿ ಮಾಡಿದ್ದಾನೆ. ಅಂದಿನಿಂದ ಅವಳು ತನ್ನ ಸೂಳೆತನವನ್ನು ಬಿಟ್ಟು ಇತರ ಶರಣೆಯರಂತೆ ವಚನ ರಚಿಸುವವಳಾಗಿದ್ದಾಳೆ. ಇನ್ನು ಮುಂದೆ ಅಸ್ಪೃಶ್ಯ ಕೆಳಜಾತಿ ಸಮುದಾಯಗಳಿಂದಲೂ ಬಂದ ಸ್ತ್ರೀಯರು ವಚನಗಳನ್ನು ಬರೆಯಬಹುದು ಎಂಬುದನ್ನು ತೋರಿಸಿದ ಒಬ್ಬ ಧೀಮಂತ ಮಹಿಳೆಯಾಗಿದ್ದಾಳೆ. ಇಂತಹ ಒಬ್ಬ ಶರಣೆಯ ಹಿಂದಿನ ಸೂಳೆತನವನ್ನು ಮತ್ತೆ ಮತ್ತೆ ಸಾಹಿತ್ಯ ಕೃತಿಗಳಲ್ಲಿ ಪ್ರಸ್ತಾಪಿಸುವುದು ಸರಿಯಲ್ಲ.

ಹಾಗೆಯೇ ಅಕ್ಕ ಮಹಾದೇವಿಯನ್ನು ಮತ್ತು ಅಲ್ಲಮ ಪ್ರಭುವನ್ನು ಕುರಿತು ಇರುವ ಕೆಲವು ಸಾಲುಗಳನ್ನು ಈ ರೀತಿ ಗುರುತಿಸಬಹುದು. ತನ್ನ ಆಧ್ಯಾತ್ಮದ ಗುರಿಸಾಧನೆಗಾಗಿ ಸಂಸಾರವನ್ನೇ ತ್ಯಜಿಸಿದ ಅಕ್ಕಮಹಾದೇವಿ ಲೌಕಿಕ ಜೀವನ ಜಂಜಾಟದ ಅಮೂಲ್ಯ ವಸ್ತುಗಳನ್ನು ತ್ಯಾಗ ಮಾಡಿ ಲೌಕಿಕದ ಆಸೆ ಆಮಿಷಗಳಿಗೆ ಒಳಗಾಗದೆ ಅಲೌಕಿಕ ಜೀವನದ ಯಾತ್ರೆಗೆ ಮುಂದಾದವಳು. ಅಷ್ಟೇ ಅಲ್ಲದೆ ನಿಂತ ನಿಲುವಿನಲ್ಲಿಯೇ ಎಲ್ಲವನ್ನೂ ತೊರೆದು, ಕಡೆಗೆ ಮೈ ಮೇಲಿನ ಅರಿವಿಗೂ ತಿಲಾಂಜಲಿಯಿತ್ತು ಚನ್ನ ಮಲ್ಲಿಕಾರ್ಜುನನನ್ನು ಅರಸುತ್ತಾ ಹೊರಟವಳು. ಅವಳು ಹೊರಟ ಈ ಪ್ರಸಂಗವನ್ನು ಕುರಿತು (ಪುಟ : ೧೭) ರಲ್ಲಿ ವರ್ಣನಾತ್ಮಕವಾಗಿ ಚಿತ್ರಿಸಿರುವುದು ಸರಿಯೆನಿಸುವುದಿಲ್ಲ. ಸಾವಿರಾರು ಜನ ನೋಡುವ ಇಂತಹ ಮಾಧ್ಯಮಗಳಲ್ಲಿ ಅವಳ ದೇಹ ಸೌಂದರ್ಯವನ್ನು ಪ್ರಸ್ತಾಪಿಸುವುದಕ್ಕಿಂತ ಅವಳ ಅಂತರಂಗದ ಸೌಂದರ್ಯವನ್ನು ಬಿಚ್ಚಿಟ್ಟಿದ್ದರೆ ಚೆನ್ನಾಗಿರುತ್ತಿತ್ತು (ಎನಿಸುತ್ತದೆ.) ಇಲ್ಲಿ ಅಕ್ಕ ಮಹಾದೇವಿಯು ಶರಣಸತಿ ಲಿಂಗಪತಿ ತತ್ವವನ್ನು ಸ್ವೀಕರಿಸಿ ತನ್ನ ಜೀವನದ ಮುಕ್ತಿಗಾಗಿ ಕಾಮಾಸಕ್ತಿಗಳನ್ನು ಗೆದ್ದು ಬದುಕಿನಲ್ಲಿ ಸಾವಿಲ್ಲದ, ಕೇಡಿಲ್ಲದ ಗಂಡ ಚನ್ನಮಲ್ಲಿಕಾರ್ಜುನ

ನನ್ನು ತನ್ನ ಪತಿ ಎಂದು ಭಾವಿಸಿದಂತಹ ವೀರ ಭಕ್ತೆ ಎಂದು ಹೇಳಬಹುದು.

ಅಲ್ಲಮ ಪ್ರಭು ತನ್ನ ನಿಜ ಭಕ್ತ ಶರಣರನ್ನು ಪರೀಕ್ಷಿಸಲು ಮಾರು ವೇಷದಿಂದ ಹೋಗಿ ಪರೀಕ್ಷಿಸುತ್ತಿದ್ದನು. ''ಧರೆಗೆ ದೊಡ್ಡವರು '' ಕಾವ್ಯದಲ್ಲಿರುವ ಒಂದು ಪ್ರಸಂಗವನ್ನು (ಪುಟ : ೧೭ ರಲ್ಲಿ ) ನೋಡಬಹುದು.

'' ಮಂಗಳ ಗುಪ್ತ : ಒಬ್ಬ ಕೆದರು ತಲೆ, ಮೈಯೆಲ್ಲಾ ಕೂರೆ, ನಾರ್ತಾ ಇರೋ ಚಿಂದಿ ಬಟ್ಟೆ - ಅಂಥವನನ್ನು ಶೂನ್ಯ ಸಿಂಹಾಸನ ಚಕ್ರವರ್ತಿ, ಶೂನ್ಯ ಸಿಂಹಾಸನ ಚಕ್ರವರ್ತಿ ಅಂತ, ಅರಮನೆ ಮುಂದೆ, ದೇವಾಲಯಗಳ ಮುಂದೆ, ಅಗ್ರಹಾರಗಳ ಮುಂದೆ, ಮಠಗಳ ಮುಂದೆ ಮರವಣಿಗೆ ಮಾಡ್ಸಿದ್ರು '' ಇದೇ ಪುಟದಲ್ಲಿ ಬಸವಣ್ಣನನ್ನು

'ಆನುದೇವಾ ಹೊರಗಣವನು ' ಕೃತಿಯು ಎಬ್ಬಿಸಿರುವ ಬಸವಣ್ಣ ಬ್ರಾಹ್ಮಣನಲ್ಲ, ಅನೈತಿಕ ಸಂಬಂಧದಿಂದ ಜನಿಸಿದವನಿರಬೇಕೆಂದು ಎಂದು ನಿರೂಪಿಸಿದಂತೆ ಇವರಿಗಿಂತ ಮುಂಚೆಯೇ ಈ ನಾಟಕಕಾರರು ಒಬ್ಬ ಬ್ರಾಹ್ಮಣ ಪಾತ್ರದ ಮೂಲಕವೇ ಇಲ್ಲಿ ಹೇಳಿಸಿರುವುದನ್ನು ನೋಡಬಹುದು.

## ೪. ಬಸವಣ್ಣನ ಚಾರಿತ್ರ್ಯ ಪ್ರಸ್ತಾಪ :

ಬಸವಣ್ಣ ಶೈವ ಬ್ರಾಹ್ಮಣ ಕುಟುಂಬದ ದಂಪತಿಗಳಾದ ಮಂಡಗೆಯ ಮಾದಿರಾಜ (ಮಾದರಸ)-ಮಾದಲಾಂಬಿಕೆಯಮ್ಮನವರ ಉದರ ಸಂಜಾತನಾಗಿ ಜನಿಸಿದವನು ಎಂಬುದಕ್ಕೆ ಸಾಕಷ್ಟು ವಿಫುಲ ಸಾಹಿತ್ಯ ದೊರೆಯುತ್ತದೆ. ಇಂತಹ ಸಂದರ್ಭದಲ್ಲಿ ಆತನ ಚಾರಿತ್ರ್ಯವನ್ನು ಕುರಿತು ನಾಟಕದ (ಪುಟ : ೧೭) ರಲ್ಲಿ

'' ಮುಕುಂದ ಭಟ್ಟ : ನಮ್ಮದೂ ತಪ್ಪಿದೆ ಸ್ವಾಮಿ, ನಾವು ಹಾಳಾಗಿ ಹೋಗಲಿ ನಮ್ಮ ಪಿಂಡಾನೇ ಅಂತ ಉದಾಸೀನ ಮಾಡಿದೆವು. ಆಮೇಲೆ ಗೊತ್ತಾಯ್ತು ಅವನ ತಾಯಿಗೆ ಬಹಳ ದಿನ ಪುತ್ರ ಫಲವಿರಲಿಲ್ಲ ಆಮೇಲೆ .......

ಆದಿನಾಥಯ್ಯ : ಅಂದರೆ ......... ಸಂದುಗೊಯ್ಕಲು ಅನ್ನಿ. ಆಶ್ಚರ್ಯ ! ನಿಮ್ಮ ಕುಲದಲ್ಲೂ ಹೀಗೆಲ್ಲ ಉಂಟಾ?''

ಎಂದು ಬಸವಣ್ಣನ ಜನನದ ಹಿಂದಿನ ರಹಸ್ಯವನ್ನು ಹೇಳಿ ಇತಿಹಾಸವನ್ನು ತಿರುಚಿದ್ದಾರೆ ಎಂದು ಹೇಳಬಹುದು. ಇದೇ ವಿಚಾರಕ್ಕಾಗಿಯೇ ಇಂದು ಸಹ 'ಆನುದೇವಾ ಹೊರಗಣವನು' ಪ್ರಬಂಧವು ಸಹ ಮುಟ್ಟುಗೋಲಾಗಿರುವುದು. ಇಲ್ಲಿನ ಈ ವಿಚಾರವನ್ನು ಕುರಿತು ಹೆಚ್ಚಾಗಿ ಇಲ್ಲಿ ಪ್ರಸ್ತಾಪಿಸದೇ ಮುಂದಿನ ೫ನೇ ಅಧ್ಯಾಯವಾದ 'ಆನುದೇವಾ ಹೊರಗಣವನು'ವಿನಲ್ಲಿ ಬಸವಣ್ಣನ ತಂದೆ -ತಾಯಿ, ಜನ್ಮಸ್ಥಳ, ಕಾಲ ಹಾಗೂ ಇತರ

ವೈಯಕ್ತಿಕ ಜೀವನಕ್ಕೆ ಸಂಬಂಧಪಟ್ಟ ಕೆಲವು ವಿಚಾರಗಳನ್ನು ಕುರಿತು ವಿವರಣೆ ನೀಡಿದ್ದೇನೆ.

**೫. ಕಲ್ಯಾಣದಲ್ಲಿ ಶಿವಶರಣರು :**

''ವಿಕ್ರಮಾದಿತ್ಯರು ನಿರ್ಮಾಣ ಮಾಡಿದ ಈ ಕಲ್ಯಾಣ ಹುಚ್ಚರ ಸಂತೆಯಾಗಿದೆ. ಇನ್ನು ಇಲ್ಲಿ ಹೊಲೆಯ ಹೊಲೆಯ ಅಲ್ಲ , ಅಗಸ ಆಗಸ ಅಲ್ಲ , ಇನ್ನು ಸೂಳೆಯರು ಸೂಳೆಯರು ಅಲ್ಲ '' ಎಂದು ಹೇಳಿಸಿರುವುದು ಸಮರ್ಪಕವಾಗಿದೆ. ಆದರೆ ಹುಚ್ಚರ ಸಂತೆಯಾಗಿದೆ ಎಂದಿರುವುದು ಸರಿ ಎನಿಸುವುದಿಲ್ಲ. ಸಮಾಜದ ಒಟ್ಟಾರೆ ಎಲ್ಲಾ ಮೂಢ ನಂಬಿಕೆಗಳನ್ನು, ಕಂದಾಚಾರವನ್ನು ಬಯಲಿಗೆಳೆದು ಸಮಾಜವನ್ನು ಪರಿವರ್ತಿಸಿದ ಶರಣರನ್ನು ಹುಚ್ಚರ ಸಂತೆ ಎಂದು ಕರೆದಿರುವುದು ಸರಿ ಕಾಣುವುದಿಲ್ಲ. ಇದು ಅವರನ್ನು ವ್ಯಂಗ್ಯವಾಗಿ ನೋಡಿದಂತಾಗುತ್ತದೆ. ಇದೇ ಕಥಾವಸ್ತುವನ್ನು ಇಟ್ಟುಕೊಂಡು ರಚನೆಯಾದ ಇದಕ್ಕಿಂತಲೂ ಮುಂಚಿನ 'ಸಂಕ್ರಾಂತಿ' ನಾಟಕದಲ್ಲಾಗಲೀ ಅಥವಾ ನಂತರ ಬಂದ 'ತಲೆದಂಡ' ನಾಟಕದಲ್ಲಾಗಲಿ ಇಂತಹ ಅಶ್ಲೀಲ, ವ್ಯಂಗ್ಯ ಎನಿಸುವಂತಹ ಪದಪ್ರಯೋಗಗಳಿಲ್ಲ ಅಥವಾ ಇತಿಹಾಸವನ್ನು ತಿರುಚಿದ್ದಾರೆ ಎಂದಾಗಲೀ ಗುರುತಿಸುವುದಕ್ಕೆ ಕಷ್ಟಸಾಧ್ಯವೇ ಆಗುತ್ತದೆ. ಅಷ್ಟೇ ಅಲ್ಲದೆ ಅವರು ತಮ್ಮ ಕೃತಿಗಳ ರಚನೆಗೆ ಪ್ರೇರಣೆ ಮತ್ತು ಕೃತಿ ರಚನೆಯ ಸಂದರ್ಭದಲ್ಲಿ ಬಳಸಿಕೊಂಡ ಕೃತಿಗಳ ಪಟ್ಟಿಯನ್ನು ಸಹ ಕಾರ್ನಾಡರು ನೀಡಿರುವುದನ್ನು ನೋಡಬಹುದು.

ಬಿಜ್ಜಳನ ಮಗ ಸೋವಿದೇವ ಮತ್ತು ಕರ್ಣದೇವನಿಗೂ ಬಿಜ್ಜಳನ ನಂತರದ ಉತ್ತರಾಧಿಕಾರಕ್ಕಾಗಿ ಜಗಳವುಂಟಾಗಿ ಅವರಿಬ್ಬರು ಬಿಜ್ಜಳನ ಬಳಿಯಲ್ಲಿಯೇ ತೀರ್ಮಾನಿಸಿಕೊಳ್ಳಲು ಬಂದಾಗ ಮುಕುಂದ ಭಟ್ಟ ''ಶಾಸ್ತ್ರಗಳಲ್ಲಿ ಎಲ್ಲಾ ಸಮಸ್ಯೆಗಳಿಗೂ ಪರಿಹಾರ ಉಂಟು, ಶಾಸ್ತ್ರವಿರುವುದೇ ಪ್ರಭುಗಳ ಅನುಕೂಲಕ್ಕಾಗಿ '' ಎಂದು ಹೇಳಿಸಿರುವುದು ಪ್ರಸ್ತುತ ಸಮಾಜವನ್ನು ನೆನಪಿಸುತ್ತದೆ. ಈ ಮಾತುಗಳು ೯೦೦ ವರ್ಷದ ಹಿಂದಿಗಷ್ಟೇ ಅನ್ವಯಿಸದೆ ಅದು ಇಂದಿಗೂ ಬೆಳೆದುಬಂದಿದೆ. ಈ ಮಾತುಗಳನ್ನು ಕುರಿತು ನಾಟಕಕಾರರಾದ ಜಿ.ರಾಜಶೇಖರ್ ಅವರು

> ''ಸ್ವತಃ 'ಮಹಾಚೈತ್ರ' ನಾಟಕದ ವಸ್ತುವೇ ನಮ್ಮನ್ನು ಈ ಬಗೆಯ ಚಿಂತನೆಗೆ ಹಚ್ಚುವಂತದ್ದಾಗಿದೆ. ಎಲ್ಲ ಸಮಸ್ಯೆಗಳಿಗೂ ತಮ್ಮ ಬಳಿ ಪರಿಹಾರವಿದೆ ಎಂದು ಜನರನ್ನು ನಂಬಿಸಲು ಹೊರಟ ಮಠಾಧೀಶರಿಗೆ ನಿಜಕ್ಕೂ ಅಪಥ್ಯವಾದದ್ದು ಆ ನಾಟಕದ ಆಧ್ಯಾತ್ಮಿಕ ಕಳವಳವೇ ಹೊರತು ಕೆಲವು ಶಬ್ದಗಳು ಅಥವಾ ಸಾಲುಗಳಲ್ಲ. ಆದರೆ ಈ ವಿಷಯದಲ್ಲಿ ನಾವು ತೀರ ನಿರಾಶಾವಾದಿಗಳಾಗುವುದು ಬೇಡ '' ಎಂದಿದ್ದಾರೆ.

ಹನ್ನೆರಡನೆ ಶತಮಾನದಲ್ಲಿ ನಡೆದ ಕಲ್ಯಾಣ ಕ್ರಾಂತಿಗೆ ಪ್ರಮುಖ ಕಾರಣ ಸಮಾಜೋಧಾರ್ಮಿಕ ಅಂತರ್ಜಾತಿಯ ವಿವಾಹ. ಇದು ಹರಳಯ್ಯನ ಮಗನಿಗೂ ಮತ್ತು ಬ್ರಾಹ್ಮಣ ಮಧುವರಸನ ಮಗಳಿಗೂ ನಡೆದ ಮೊದಲ ಅಂತರ್ಜಾತಿಯ ವಿವಾಹ. ಈ ವಿವಾಹವನ್ನು ಅನೇಕ ಮಂದಿ ವಿದ್ವಾಂಸರು, ಬರಹಗಾರರು, ಲೇಖಕರು.... ಹೀಗೆ ಮುಂತಾದವರು ಒಂದೊಂದು ರೀತಿ ರಚನೆ ಮಾಡಿದ್ದಾರೆ. ಮತ್ತು ಈ ವಧು -ವರರ ಹೆಸರುಗಳನ್ನು ಸಹ ಬೇರೆ ಬೇರೆಯಾಗಿ ಹೆಸರಿಸಿದ್ದಾರೆ. ಇವುಗಳನ್ನೆಲ್ಲಾ ನೋಡಿದರೆ ಹರಳಯ್ಯನಿಗೆ ಮತ್ತು ಮಧುವಯ್ಯನಿಗೆ ಎಷ್ಟು ಜನ ಮಕ್ಕಳಿದ್ದರು ? ಮತ್ತು ಎಷ್ಟು ಮದುವೆಗಳು ನಡೆದವು ? ಎಂಬ ಪ್ರಶ್ನೆಗಳು ಇಂದಿನ ಯುವ ಓದುಗರಲ್ಲಿ ಮನೆಮಾಡಿವೆ ಎಂದು ಹೇಳಬಹುದು. ಅದರಲ್ಲಿ ಕೆಲವರು ಹರಳಯ್ಯನ ಮಗನಿಗೆ ಮತ್ತು ಮಧುವರಸನ ಮಗಳಿಗೆ ವಿವಾಹ ನಡೆಯಿತು ಎಂದು ಹೇಳಿದರೆ ಇನ್ನು ಕೆಲವರು ಇಲ್ಲ ಇಲ್ಲ, ಮಧುವರಸನ ಮಗನಿಗೂ ಮತ್ತು ಹರಳಯ್ಯನ ಮಗಳಿಗೂ ವಿವಾಹ ನಡೆಯಿತು ಎಂದೂ ಹೇಳುವವರಿದ್ದಾರೆ. ಅಷ್ಟೇ ಅಲ್ಲದೆ ಮದುವೆ ನಡೆಯಿತು ಎಂದು ಕೆಲವರು ಗುರುತಿಸಿದಂತೆ ಇನ್ನು ಕೆಲವರು ಮದುವೆ ನಡೆಸಲು ಉದ್ದೇಶಿಸಿದ್ದರು ಆದರೆ ನಡೆಯಲಿಲ್ಲ ಎನ್ನುವವರೂ ನಮ್ಮ ಮುಂದೆಯೇ ಇದ್ದಾರೆ. ಉದಾ : 'ಮಹಾಚೈತ್ರ' ನಾಟಕದಲ್ಲಿ ಹರಳಯ್ಯನ ಮಗ ಶೀಲವಂತನಿಗೂ, ಬ್ರಾಹ್ಮಣನಾದ ಮಧುವಯ್ಯನವರ ಮಗಳು ಮಾಧವಿಗೂ ವಿವಾಹ ನಡೆಯಿತು. ಇದರಿಂದ ಕಲ್ಯಾಣದಲ್ಲಿ ಕ್ರಾಂತಿಗೆ ಕಾರಣವಾಯಿತು ಎಂದು ನಿರೂಪಿಸಿದರೆ, ಲಂಕೇಶರು 'ಸಂಕ್ರಾಂತಿ' ನಾಟಕದಲ್ಲಿ ಹೊಲೆಯರ ಉಜ್ಜನ ಮಗ ರುದ್ರನ ಮತ್ತು ಶಾಸ್ತ್ರಿಯ ಮಗಳು ಉಷಾಳ ಪ್ರೇಮ ಪ್ರಸಂಗವೇ ಕಲ್ಯಾಣ ಕ್ರಾಂತಿಗೆ ಕಾರಣವೆಂದು ನಿರೂಪಿಸುತ್ತಾರೆ. ಇನ್ನು ಕಾರ್ನಾಡ ಅವರು ಹರಳಯ್ಯನ ಮಗ ಶೀಲನಿಗೂ ಮತ್ತು ಮಧುವರಸನ ಮಗಳು ಕಲಾವತಿಗೂ ನಡೆದ ಅಂತರ್ಜಾತಿಯ ವಿವಾಹವೇ ಕಾರಣವೆಂದು ಹೇಳಿದಂತೆ, ಪಿ.ವಿ. ನಾರಾಯಣ ಅವರು ತಮ್ಮ 'ಧರ್ಮಕಾರಣ'ದಲ್ಲಿ ಹರಳಯ್ಯನ ಮಗ ಕೇತನಿಗೂ ಮತ್ತು ಮಧುವರಸನ ಮಗಳು ಚಂದಲೆಯರ ಮದುವೆ ನಡೆಸಲು ಮುಂದಾದ್ದರಿಂದ ಕಲ್ಯಾಣದಲ್ಲಿ ಕ್ರಾಂತಿ ನಡೆಯಲು ಕಾರಣವಾಯಿತು ಎಂದು ಹೀಗೆ ಒಬ್ಬೊಬ್ಬರು ಒಂದೊಂದು ರೀತಿ ನಿರೂಪಿಸಿರುವುದನ್ನು ನೋಡಬಹುದು. ಇವು ಸಹ ಮುಂದೊಂದು ದಿನ ವಚನ ಚಳುವಳಿಯ ಇತಿಹಾಸ ತಿಳಿಯದವರು ಚರಿತ್ರೆ ಕಟ್ಟುವಲ್ಲಿ ಮುಂದಾದಾಗ ಪ್ರಮುಖ ಪಾತ್ರ ವಹಿಸುತ್ತವೆ. ಆದ್ದರಿಂದ ಒಬ್ಬೊಬ್ಬರು ಒಂದೊಂದು ರೀತಿ ನಾಮ ಸ್ಥಾನಪಲ್ಲಟ ಬದಲಾಯಿಸುವುದನ್ನು ಬಿಡಬೇಕು ಮತ್ತು ಚರಿತ್ರೆಯ ಹೆಸರುಗಳನ್ನು ಇಟ್ಟುಕೊಂಡು ರಚಿಸಲು ಮುಂದಾಗಿ ಮುಂದಾಗುವ ತೊಂದರೆಗಳನ್ನು ಇಂದಿನಿಂದಲೇ ತಪ್ಪಿಸಲು ಲೇಖಕರು ಕೈಜೋಡಿಸಬೇಕು.

ಹೀಗೆ ಎಲ್ಲರೂ ಒಂದು ಅಂತರ್ಜಾತಿಯ ವಿವಾಹ ನಡೆಯಿತು ಎಂದು ಹೇಳಿ ತಮ್ಮ ಕೃತಿಗಳಲ್ಲಿ ಒಂದು ವಿವಾಹವನ್ನು ಪ್ರಸ್ತಾಪಿಸಿದರೆ ಈ ನಾಟಕದಲ್ಲಿ ಎರಡು ಅಂತರ್ಜಾತಿಯ ವಿವಾಹ ಮಾಡಿಸಿರುವುದು ಆಧುನಿಕತೆಗೆ ಒಪ್ಪುವಂತಹದ್ದೇ ಆಗಿದೆ (ಪುಟ : ೨೮, ದೃಶ್ಯ:೪) ಈ ಪ್ರತಿಲೋಮ ಅಂತರ್ಜಾತಿಯ ವಿವಾಹವು ಸಹ ವಿವಾದಗಳಲ್ಲಿ ಎತ್ತಲಾದ ಒಂದು ಅಂಶವೆನ್ನಬಹುದು.

ಹಾಗೆಯೇ ಪುಟ ೩೨ ರಲ್ಲಿ ಶರಣರ ನಡುವೆ ಜಂಗಮರ ಪ್ರವೇಶ ಆಗಿರುವುದು ದ್ವಂದ್ವತೆಗೆ ಕಾರಣವಾಗಿದೆ. ಇಲ್ಲಿ ಬ್ರಾಹ್ಮಣರು ಜಂಗಮರನ್ನು ಈ ಕೋಡಂಗಿಗಳು ಇಲ್ಲಿಗೆ ಯಾಕೆ ಬರೋಣವಾಯಿತು? ಹಿ ಹಿ.......ಹಿ........ ಹಿ ಅವರ ಗುರುಗಳೇ ಗಂಟು ಮೂಟೆ ಕಟ್ಟಿಕೊಂಡು ಪರಾರಿಯಾದರು. ಪಾಪ, ಅನ್ನ ಆಹಾರಗಳಿಲ್ಲದೆ ಸೊರಗಿಬಿಟ್ಟಿವೆ ಮುಂಡೇವು. ಪಾಷಂಡಿಗಳು .... ಅಪಶಕುನ.... ಅಪಶಕುನ ಎಂದು ಹೇಳುತ್ತಾರೆ. ಆಗ ಜಂಗಮರು ಸಂಸ್ಕೃತದ ಶ್ಲೋಕವನ್ನು ಹೇಳಿ ನಾವು ನಿಮ್ಮಷ್ಟೇ ಎಂದು ಹೇಳಿದಾಗ ನಾಯಿಗಳ ಬಾಯಲ್ಲಿ ಸಂಸ್ಕೃತ - ಎಂದು ಬ್ರಾಹ್ಮಣರು ಜಂಗಮರನ್ನು ಕರೆದಾಗ ಜಂಗಮರು ಹೀಗೆ ಹೇಳುತ್ತಾರೆ.

''ಜಂಗಮ ೧ : ನಾವಲ್ಲ ಆ ಮಹಾಮನೆಯವರು ನಾಯಿಗಳು, ಜಾತಿಗೆಟ್ಟರು ಕೆಟ್ಟರು ಎಂದು ಹಾಡುವರು.

ಜಂಗಮ ೧ : ಮಹಾಮನೆಯವರು ಕುಲಗೆಟ್ಟವರು, ನಾವು ಅವರನ್ನು ಉಗಿದು ಬಿಟ್ಟೋರು ''

ಹೀಗೆ ಶರಣರನ್ನು ಜಂಗಮರು ಅಶ್ಲೀವಾಗಿ ಕರೆದಿರುವುದನ್ನು ನೋಡಬಹುದು. ಇಲ್ಲಿ ಮಾನವ ಕುಲೋದ್ಧಾರ ಕೆಲಸಗಳನ್ನು ಮಾಡಿದ ಬಸವಾದಿ ಶರಣರನ್ನು ಈ ಜಂಗಮ ಸನ್ಯಾಸಿಗಳು ಬಸವನಿಲ್ಲದ ಮಹಾಮನೆಯನ್ನು ಹಾಗೂ ಶಿವಶರಣರನ್ನು ಜರೆದಂತೆ ಚಿತ್ರಿಸಿದ್ದಾರೆ. 'ಶರಣ', 'ಜಂಗಮ' ಎಂಬುದಕ್ಕೆ ವೀರಶೈವ ಧರ್ಮದಲ್ಲಿ ಒಂದೇ ಅರ್ಥ ನೀಡುತ್ತವೆ. ಇಲ್ಲಿ ವೈದಿಕ ಧರ್ಮದಲ್ಲಿ ಜಂಗಮರಿಗೆ ಬೇರೆಯಾದ ಅರ್ಥ ವಿಶ್ಲೇಷಣೆ ಇದೆ. ಇಲ್ಲಿ 'ಜಂಗಮ' ಎಂದರೆ ಸಂಸಾರ ಬಂಧನಗಳಿಂದ ಮುಕ್ತನಾಗಿ ಸನ್ಯಾಸವನ್ನು ಕೈಗೊಂಡು ವ್ರತಧಾರಿಯಾಗುವುದರ ಮೂಲಕ ಮುಕ್ತಿ ಪಡೆಯುವವನು. ಆದರೆ, ವೀರಶೈವ ಧರ್ಮದಲ್ಲಿ 'ಶರಣ' ಎಂಬುದಕ್ಕೆ ಸಂಸಾರದಲ್ಲಿದ್ದುಕೊಂಡೇ ಅಂತರಂಗವನ್ನು ಪರಮಾತ್ಮನ ಧ್ಯಾನಕ್ಕೆ , ಸೇವೆಗೆ ಅರ್ಪಿಸಿ ಕಾಯಕದಲ್ಲಿ ತೊಡಗುವುದರ ಮೂಲಕ ಮುಕ್ತಿ ಪಡೆಯುವುದಾಗಿದೆ.

೬. ಬಸವಣ್ಣನ ಐಕ್ಯ :

ಬಸವಣ್ಣ ನಿಜ ಜೀವನದಲ್ಲಿ ಬದುಕಿದ್ದು ಕೇವಲ ೩೬ ವರ್ಷಗಳು ಎಂಬುದು ಒಟ್ಟಾರೆಯಾಗಿ ಸಿಕ್ಕಿರುವ ಆಧಾರಗಳಿಂದ ತಿಳಿದುಬರುತ್ತದೆ. ಅಷ್ಟು ಚಿಕ್ಕ ವಯಸ್ಸಿಗೆ ಆತನು ಮಾಡಿದ, ಕೈಗೊಂಡಿದ್ದ ಸೇವೆ ಕಾಯಕ ಅನನ್ಯವಾದದ್ದಾಗಿದೆ ಮತ್ತು ಇಂದಿಗೂ ಸುಮಾರು ೮೫೦ ವರ್ಷಗಳಾದರೂ ಇನ್ನೂ ಆತನ ತತ್ವಗಳು ಪ್ರಸ್ತುತವಾಗಿ ಸಮಾಜದಲ್ಲಿ ಉಳಿದುಬಂದಿದೆ.ಇಂತಹ ವ್ಯಕ್ತಿಯ ಶೀಲ, ಚಾರಿತ್ರ್ಯ, ವೈಯಕ್ತಿಕ ಜೀವನದ ಅಂಶಗಳನ್ನು ಸಂಶಯಿಸಿರುವುದು ೨೧ನೇ ಶತಮಾನದ ಆಧುನಿಕ ಮಾನವನಿಗೆ ಶ್ರೇಯಸ್ಕರವಲ್ಲ ಎಂದು ಹೇಳಬಹುದಾಗಿದೆ. ಹೀಗೆ ೨ನೇ ಅಂಕದ ೨ನೇ ದೃಶ್ಯದಲ್ಲಿ ಬಸವಣ್ಣನು ಸಂಗಮನಲ್ಲಿ ಐಕ್ಯನಾಗಿದ್ದನ್ನು ನೀಲಾಂಬಿಕೆಗೆ ಬಹುರೂಪಿ ಚೌಡಯ್ಯ, ತಲಕೇತಯ್ಯ ಮತ್ತು ನಗೆಯಮಾರಿತಂದೆ ಈ ಮೂರು ಜನ ಶರಣರು ಒಳನಾಟಕೀಯವಾಗಿ ಅಭಿನಯ ಮಾಡಿತೋರಿಸುತ್ತಾರೆ. ಬಸವಣ್ಣ ಕೂಡಲ ಸಂಗಮಕ್ಕೆ ಹೋಗಿ ಐಕ್ಯವಾಗಿದ್ದನ್ನು ಅನೇಕ ವಿದ್ವಾಂಸರು ಅನೇಕ ರೀತಿಯಲ್ಲಿ ತಮಗೆ ಸಿಕ್ಕಿರುವ ಶಾಸನಗಳು, ಸಾಹಿತ್ಯ ಕೃತಿಗಳನ್ನಿಟ್ಟುಕೊಂಡು ಬಸವಣ್ಣನು ಕಲ್ಯಾಣದಲ್ಲಿ ಬಿಜ್ಜಳನ ಸಾವಿನ ನಂತರ ಕೂಡಲ ಸಂಗಮಕ್ಕೆ ಹೋಗಿ ಐಕ್ಯನಾದನೆಂದೂ, ಬಿಜ್ಜಳನಿಂದ ಬಹಿಷ್ಕಾರಗೊಂಡು ಕೂಡಲ ಸಂಗಮಕ್ಕೆ ಹೋಗಿ ಬಿಜ್ಜಳನ ಸಾವಿಗಿಂತ ಮುಂಚೆಯೇ ಮರಣ ಹೊಂದಿದನೆಂದೂ ಕೆಲವರು ಕರೆದಿದ್ದಾರೆ. ಇನ್ನೂ ಕೆಲವರು ಇಲ್ಲ ಇಲ್ಲ , ಅವರಿಬ್ಬರಲ್ಲಿಯೂ ಅನನ್ಯ ಸಾಮರಸ್ಯವಿತ್ತು ಮತ್ತು ಸಂಬಂಧವಿತ್ತು. ಬಸವಣ್ಣನೇ ತನ್ನ ೩೬ನೇ ವರ್ಷದಲ್ಲಿ ವಿಶ್ರಾಂತಿ ಪಡೆಯಲು ತನ್ನ ಭಂಡಾರಿ ಸ್ಥಾನಕ್ಕೆ ರಾಜೀನಾಮೆ ನೀಡಿ ಕೂಡಲ ಸಂಗಮದಲ್ಲಿ ನೆಲೆಸಿ ಐಕ್ಯನಾದನೆಂದೂ ಹೇಳುತ್ತಾರೆ. ಹಾಗೆಯೇ ಬಿಜ್ಜಳನು ರಣರಂಗದಲ್ಲಿ ಗಾಯಗೊಂಡು ನಂತರ ಮರಣವನ್ನಪ್ಪಿದನೆಂದೂ, ಶರಣರೇ ಬಿಜ್ಜಳನನ್ನು ಕೊಂದರೆಂದೂ ಆರೋಪವಿದೆ. ಒಟ್ಟಾರೆಯಾಗಿ ಬಿಜ್ಜಳ ಅಥವಾ ಅವನ ಮಗ ಕೆಲವು ದುಷ್ಟ ವೈದಿಕ ರಾಜಕಾರಣಿಗಳ ಪಿತೂರಿಯಿಂದ ಶಿವಶರಣರಾದ ಹರಳಯ್ಯನ ಹಾಗೂ ಮಧುವಯ್ಯನನ್ನು ಕೊಲ್ಲಿಸಿದರೆಂದು ತಿಳಿದುಬರುತ್ತದೆ. ಈ ವಿಚಾರವನ್ನು ಸಮಾಜದಲ್ಲಿನ ಎಲ್ಲರೂ ಒಪ್ಪಿಕೊಂಡ ವಿಷಯವಾಗಿದೆ.

೮೦ರ ದಶಕದ ನಂತರ ನಾಟಕ ಕೃತಿ ರಚನೆ ಮಾಡಲು ಮುಂದಾಗಿ ಮೊದಲ ನಾಟಕವನ್ನು ಬರೆದದ್ದು ಈ 'ಮಹಾಚೈತ್ರ'ವನ್ನು. ಇದು ಅವರಿಗೇನು ಕಷ್ಟ ಎಂದೆನಿಸಲಿಲ್ಲ ಎಂಬುದಕ್ಕೆ ಮುಖ್ಯ ಕಾರಣ ಅವರು ಒಬ್ಬ ನಾಟಕಕಾರರಾಗಿದ್ದದ್ದು. ಅಷ್ಟೇ ಅಲ್ಲದೆ ಇವರು ಕಲಾವಿದರೂ ಮತ್ತು ಕವಿತೆಗಳನ್ನು ಬರೆದವರೂ ಆಗಿದ್ದರಿಂದ ಇವರಿಗೆ ನಾಟಕ ಬರೆಯಲು ಸುಲಭವಾಯಿತೆಂದು ತಿಳಿಸಿದ್ದಾರೆ. ರಂಗ ಮಂಚದ ಮೇಲೆ ನಾಟಕ ಪ್ರಯೋಗವಾಗಲು

ಬೇಕಾದ ಕಥೆ, ಯಶಸ್ವಿ ಪ್ರಯೋಗವೆಂದೆನಿಸಿಕೊಳ್ಳಲು ಬೇಕಾದ ಪದಗಳ ಭಾಷೆ, ನಿರೂಪಣೆ ಎಲ್ಲವನ್ನೂ ಅಚ್ಚುಕಟ್ಟಾಗಿ ಕಟ್ಟಿಕೊಟ್ಟಿದ್ದಾರೆ. ಆದರೆ, ಕೆಲವೊಂದು ಸಂದರ್ಭಗಳಲ್ಲಿ ಮಾತುಗಳಿಗೆ ಹಿಡಿತವಿಲ್ಲದೆ ನಿರೂಪಣೆಯಾಗಿರುವುದನ್ನು ನೋಡಬಹುದು. ನಾಟಕದ ಕೊನೆಯ ದೃಶ್ಯಗಳಂತು ನೋಡುಗರನ್ನು ಮೂಕವಿಸ್ಮಿತ ಸ್ತಬ್ಧರನ್ನಾಗಿ ಮಾಡುತ್ತವೆ. ಆತಂಕಗಳಿಂದ, ಗಂಭೀರತೆಗಳಿಂದ ನಾಟಕದ ಕಥೆ ನಡೆಯುತ್ತದೆ. ಪಾತ್ರಗಳಂತು ಕಥೆಗೆ ಜೀವ ತುಂಬಿ ಕಲ್ಯಾಣದ ಕ್ರಾಂತಿಯೇ ನಮ್ಮ ಮುಂದೆ ನಡೆಯುತ್ತಿದೆಯೇನೋ ಎಂದೆನಿಸುವಂತೆ ಮಾತಾಡುತ್ತವೆ. ಬಿಜ್ಜಳನ ಸಮಾಜದಲ್ಲಿನ ಹರಳಯ್ಯ, ಮಧುವಯ್ಯ ಮತ್ತು ಶೀಲವಂತರಿಗೆ ವರ್ಣಸಂಕರ ಮಾಡಿದ ತಪ್ಪಿಗಾಗಿ ಈ ಶಿಕ್ಷೆ ವಿಧಿಸುತ್ತಾನೆ. ಆ ಆರೋಪದ ಮೇಲೆ ಅವರನ್ನು ಬಂಧಿಸಿ, ಅವರ ಕಣ್ಣುಗಳನ್ನು ಕೀಳಿಸಿ ಕುದುರೆಯ ಕಾಲುಗಳಿಗೆ ಕಟ್ಟಿಸಿ ಎಳೆ ಹೂಟೆ ಮಾಡಿಸಿ ಕ್ರೂರವಾಗಿ ಹಿಂಸಿಸಿ ಕೊಲ್ಲಿಸುತ್ತಾನೆ. ಈ ಘಟನೆಗಳಿಂದ ಆವೇಶಗೊಂಡು ಬಿಜ್ಜಳನ ವಿರುದ್ಧ ದಂಗೆಯೆದ್ದು ಶರಣರು ಅವನನ್ನು ಮತ್ತು ಅವನ ಯಜ್ಞ ಶಾಲೆಯನ್ನು ನಾಶ ಮಾಡಲು ಮುಂದಾಗಿರುವುದು ಸಮರ್ಪಕವಾಗಿ ಆಧುನಿಕ ಶೈಲಿಯೊಂದಿಗೆ ಒಗ್ಗಿಸಿಕೊಂಡು ನಿರೂಪಿಸಿದಂತಿದೆ.

ಅಂತಿಮವಾಗಿ ಮೇಲಿನ ಎಲ್ಲಾ ಅಧ್ಯಯನ ವಿಶ್ಲೇಷಣೆಯಿಂದ ಪ್ರಮುಖವಾಗಿ ತಿಳಿದುಕೊಳ್ಳಬೇಕಾದ ಅಂಶಗಳೆಂದರೆ, ಯಾರೂ ಸಹ ವಿವಾದಗಳಿಗಾಗಿ ಸಾಹಿತ್ಯ ಕೃತಿಗಳನ್ನು ರಚಿಸುವುದಿಲ್ಲ ಮತ್ತು ಸಮಾಜದಲ್ಲಿ ತಮ್ಮನ್ನು ಗುರುತಿಸಿಕೊಳ್ಳಲು ಸಾಹಿತ್ಯ ಕೃತಿಗಳನ್ನು ರಚಿಸುವುದಿಲ್ಲ ಎಂಬುದನ್ನು ತಿಳಿಯಬೇಕಾಗುತ್ತದೆ. ನಾಟಕ ಹೆಚ್ಚು ಜನರನ್ನು ತಲುಪುವ ಸಾಹಿತ್ಯ ಪ್ರಕಾರಗಳಲ್ಲಿ ಒಂದಾಗಿರುವುದರಿಂದ ಲೇಖಕರು ಈ ಪ್ರಕಾರವನ್ನು ಹೆಚ್ಚಾಗಿ ಆಯ್ಕೆ ಮಾಡಿಕೊಂಡು ಸಮಾಜವನ್ನು ಮರು ವಿಶ್ಲೇಷಣೆಗೆ ಒಳಪಡಿಸಿಕೊಳ್ಳುತ್ತಾರೆ. ಇಂತಹ ಸಂದರ್ಭದಲ್ಲಿ ಯಾವುದಾದರೂ ಒಂದು ಸಂದೇಶವನ್ನು, ನೀತಿ ಪಾಠವನ್ನು ಸಮಾಜಕ್ಕೆ ಬಿತ್ತರಿಸುವಲ್ಲಿ ಮುಂದಾಗಿರುತ್ತಾರೆ. ಹೀಗೆ ಸಮಾಜದಲ್ಲಿನ ಮೂಢ ನಂಬಿಕೆಗಳನ್ನು ಎತ್ತಿ ಹಿಡಿದು, ಸಮಾಜದಲ್ಲಿನ ರಾಜಕೀಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಪಿಡುಗುಗಳ ಸ್ಥಿತಿಗತಿಗಳನ್ನು ಜನಸಮುದಾಯಕ್ಕೆ ಎತ್ತಿ ತೋರಿಸುತ್ತಾರೆ. ಮತ್ತು ಅವುಗಳನ್ನು ವಿಮರ್ಶಿಸುವ, ವಿಡಂಬಿಸುವ ಕಾರ್ಯವನ್ನೂ ಮಾಡುತ್ತಿರುತ್ತಾರೆ. ಹೀಗಿರುವಾಗ ಕೆಲವು ಅಂಶಗಳು ಕೆಲವರಿಗೆ ಇಷ್ಟವಾಗಬಹುದು ಅಥವಾ ಇನ್ನು ಕೆಲವರಿಗೆ ಇಷ್ಟವಾಗದೆಯೂ ಇರಬಹುದು. ಅಂತಹ ಸಂದರ್ಭದಲ್ಲಿ ಜಾತಿ, ಧರ್ಮ, ಸಂಪ್ರದಾಯಗಳ ಬಂಧನದಿಂದ ಬಿಡಿಸಿಕೊಳ್ಳಲಾಗದ ಜನತೆಗೆ ತಮ್ಮ ಧರ್ಮ, ಜಾತಿ, ಆಚರಣೆ, ನಿಯಮಗಳನ್ನು ವಿಡಂಬಿಸಿದ್ದಾರೆ, ಅಶ್ಲೀಲವಾಗಿ ಬಳಸಿಕೊಂಡಿದ್ದಾರೆ ಎಂದು ಅನ್ನಿಸಿರಬಹುದು. ಆದರೆ,

ಅವುಗಳಿಗೆಲ್ಲಾ ಮಾನ್ಯತೆ ನೀಡಿ ಸಮಾಜದಲ್ಲಿ ಗಲಭೆ, ಕೋಲಾಹಲವನ್ನು ಉಂಟು ಮಾಡುವುದು, ಕೃತಿಯ ಮುಟ್ಟುಗೋಲಿಗೆ ಆಗ್ರಹಿಸಿ ರದ್ದುಪಡಿಸಿರುವುದು ಸರಿಯಲ್ಲ ಎನಿಸುತ್ತದೆ. ಅದೇ ರೀತಿ ಲೇಖಕರು ಸಹ ಯಾವುದೇ ರೀತಿಯ ದಾಖಲೆಗಳಿಲ್ಲದೆ ಚಾರಿತ್ರಿಕ ವ್ಯಕ್ತಿಗಳನ್ನು ಕೃತಿಗಳಲ್ಲಿ ಚಿತ್ರಿಸುವಾಗ ಅವರನ್ನು ಅವಮಾನಿಸಬಾರದಿತ್ತು. ಏನೇ ಆದರೂ ಸಾಹಿತ್ಯ ಕೃತಿಗಳಲ್ಲಿ ಇನ್ನೊಬ್ಬರ ವೈಯಕ್ತಿಕ ವಿಚಾರಗಳನ್ನು ಪ್ರಸ್ತಾಪಿಸಬಾರದು. ಲೇಖಕ ಸಮಾಜವನ್ನು ದೃಷ್ಟಿಯಲ್ಲಿಟ್ಟುಕೊಂಡು ಕೃತಿ ರಚಿಸಿದಂತೆ ಜನಪ್ರತಿನಿಧಿಗಳು ಸಹ ಶಾಂತಿಯಿಂದ ಕೃತಿಯನ್ನು ವಿಮರ್ಶಿಸಬೇಕು ಮತ್ತು ಯಾವುದೇ ರೀತಿಯ ವೈಯಕ್ತಿಕ ದ್ವೇಷಗಳ ಆತಂಕಕ್ಕೆ ಒಳಗಾಗಿ ಒಬ್ಬ ಲೇಖಕ, ಬರಹಗಾರ, ಸಂಶೋಧಕರ ಮನೋಸ್ಥೈರ್ಯವನ್ನು ಕುಗ್ಗಿಸಲು ಮುಂದಾಗಬಾರದು. ಎಲ್ಲಾ ಪ್ರಾಜ್ಞರ ದೃಷ್ಟಿಕೋನವು ಇಂದು ಬದಲಾಗಿರುವುದರಿಂದ ಮತ್ತು ಕಾಲವು ಗತಿಸಿರುವುದರಿಂದ ಪ್ರತಿಯೊಂದು ಸಂಶಯ, ಅನುಮಾನವನ್ನು ಪರೀಕ್ಷಿಸುವ, ಪರಿಶೀಲಿಸುವ, ವಿಮರ್ಶಿಸುವ ಗುಣಗಳನ್ನು ಬಳಸಿಕೊಂಡಿದ್ದಾರೆ. ಈ ನಿಟ್ಟನಲ್ಲಿ ಮತ್ತೊಮ್ಮೆ ಈ ವಿವಾದಿತ ನಾಟಕವನ್ನು ಪರಿಶೀಲಿಸಿ ವಿಶ್ಲೇಷಣೆಗೆ ಒಳಪಡಿಸಿಕೊಳ್ಳಬೇಕಾಗಿದೆ.

---

## ಅಧ್ಯಾಯ - ೪

## 'ಧರ್ಮಕಾರಣ'ದ ಸುತ್ತಮುತ್ತ ಒಂದು ಹಿನ್ನೋಟ

**ಪೀಠಿಕೆ :** ಬಸವಣ್ಣನವರ ಚಳುವಳಿಯನ್ನೇ ಕೇಂದ್ರವಾಗಿಟ್ಟುಕೊಂಡು ರಚಿಸಿದ 'ಸಂಕ್ರಾಂತಿ', 'ಮಹಾಚೈತ್ರ' ಮತ್ತು 'ತಲೆದಂಡ' ನಾಟಕಗಳಿಗಿಂತ 'ಧರ್ಮಕಾರಣ' ಕಾದಂಬರಿಯು ಭಿನ್ನವಾಗುವುದು ಅದರ ವಸ್ತುವಿನ ಆಯ್ಕೆಯಲ್ಲಿ. ಈ ಮೊದಲ ಮೂರು ನಾಟಕಗಳಲ್ಲಿ ಬಸವಣ್ಣ ಇತರ ಪಾತ್ರಗಳಂತೆಯೇ ಒಂದು ಪಾತ್ರ. ಈ ನಾಟಕಗಳಲ್ಲಿನ ಕಾಲ, ಚಳುವಳಿಯ ಚಿತ್ರಣ, ಸಮಾಜ ಚಳುವಳಿಯ ಏಳುಬೀಳಿನ ಕಥೆ, ಅವುಗಳ ಪ್ರಭಾವ- ಪ್ರೇರಣೆಗಳು ಒಂದಕ್ಕೊಂದು ಭಿನ್ನವಾಗಿವೆ. ಈ ಕೃತಿಗಳ ಕೊನೆಯಲ್ಲಿ ಒಂದು ರೀತಿಯ ದುಷ್ಟರ ಮರಣದಿಂದ ಸಮಾಧಾನವಾಗಿ ಉಸಿರಾಡುವಂತೆ ನೋಡುಗರಲ್ಲಿ ಉಂಟು ಮಾಡುತ್ತದೆ. ಮತ್ತು ಕಲ್ಯಾಣದಲ್ಲಿ ಶರಣರ ಹಾಗೂ ಸಾಮಾನ್ಯ ಮುಗ್ಧ ಜನತೆಯ ರಕ್ತಪಾತ ಮುಂತಾದ ಭೀಕರ ಘಟನೆಗಳ ಚಿತ್ರಣವಿದ್ದಂತೆ 'ಧರ್ಮಕಾರಣ' ಕಾದಂಬರಿಯಲ್ಲಿ ಇಲ್ಲ. ಆದರೆ, ಬಸವಣ್ಣನ ತಾಕಲಾಟಗಳು, ಸಮಾಜದಲ್ಲಿನ ಬೆಳವಣಿಗೆಗಳು ಗಂಭೀರವಾಗಿ ರಚಿಸಲ್ಪಟ್ಟವುಗಳು. 'ಮಹಾಚೈತ್ರ 'ದಲ್ಲಿ ಬಸವಣ್ಣ ತನ್ನ ಭಂಡಾರಿ ಸ್ಥಾನದಿಂದ ಪದತ್ಯಾಗ ಮಾಡಿ ಕೂಡಲ ಸಂಗಮಕ್ಕೆ ಹೋದ ನಂತರದ ಕಥೆ. ಇನ್ನುಳಿದಂತೆ 'ಸಂಕ್ರಾಂತಿ' ಮತ್ತು 'ತಲೆದಂಡ ' ನಾಟಕಗಳಲ್ಲಿ ಬಸವಣ್ಣನು ಸಹ ಇತರ ವ್ಯಕ್ತಿಗಳಂತೆ ಚಿತ್ರಿತನಾಗಿದ್ದಾನೆ. ಇವೆಲ್ಲವುಗಳಿಗಿಂತ ಭಿನ್ನವಾಗಿ ಈ ಕಾದಂಬರಿಯಲ್ಲಿ ಬಸವಣ್ಣ ತನ್ನ ಸ್ಥಾನದಿಂದ ಪದತ್ಯಾಗ ಮಾಡಿ ತನ್ನವರೊಂದಿಗೆ ಕಲ್ಯಾಣವನ್ನು ತ್ಯಜಿಸುವಲ್ಲಿ 'ಧರ್ಮಕಾರಣ' ಕಾದಂಬರಿಯ ಕಥೆ ಮುಕ್ತಾಯವಾಗಿದೆ.

ಪಿ.ವಿ.ನಾರಾಯಣ್ ಅವರು ಈ ಕಾದಂಬರಿಯಲ್ಲಿ ಬಸವಣ್ಣನು ತನ್ನ ಭಂಡಾರಿ ಸ್ಥಾನದಿಂದ ಕೆಳಗಿಳಿದು ಕೂಡಲ ಸಂಗಮಕ್ಕೆ ಹೊರಟು ಹೋಗುವಲ್ಲಿಗೆ ಕಥಾವಸ್ತು ನಿಲ್ಲಿಸಿರುವುದನ್ನು ಕುರಿತು ಸೌ.ಮೀನಾರಾವ್ ಅವರು ತಮ್ಮ ಒಂದು ಲೇಖನದಲ್ಲಿ ಅಭಿವ್ಯಕ್ತಪಡಿಸಿರುವ ಬಗೆಯನ್ನು ಈ ರೀತಿ ನೋಡಬಹುದು.

> ''ಬಸವಣ್ಣನವರ ಬದುಕು ಅರಳಿದ ಬಗೆಯನ್ನು ಚಿತ್ರಿಸುವುದಷ್ಟೇ ಲೇಖಕರ ಉದ್ದೇಶವಾದ್ದರಿಂದ ಬಸವಣ್ಣನವರ ಕಲ್ಯಾಣ ತ್ಯಜಿಸುವಿಕೆಯ ಅನಂತರದಲ್ಲಿ ಅಲ್ಲಿ ಏನಾಯಿತು ಎನ್ನುವುದು ಅಷ್ಟರ ಮಟ್ಟಿಗೆ ಅಪ್ರಸ್ತುತ. ಮುಂದಿನ ಕಥೆಯಲ್ಲಿ ಶರಣ ಚಳುವಳಿಯ ಕಲ್ಯಾಣದ ಅಧಃಪತನವೇ ಆದುದ್ದರಿಂದ ಲೇಖಕರು ಕಾದಂಬರಿಯನ್ನು ಅಲ್ಲಿಗೇ ಮುಗಿಸಿರುವುದು ತಾರ್ಕಿಕವಾಗಿ ಸಮರ್ಪಕವಾಗಿದೆ ಎನಿಸುತ್ತದೆ. ಇಲ್ಲಿ

ಜಾತಿಯ ಕಾರಣದಿಂದ ಕಲ್ಯಾಣ ಪ್ರಕ್ಷುಬ್ಧವಾಯಿತು. ಜನರಲ್ಲಿ ಅಪನಂಬಿಕೆ ಮೂಡಿತು. ಮುಜುಗರದ ವಾತಾವರಣವೇ ಏರ್ಪಟ್ಟಿತ್ತು ಎಂದು ಲೇಖಕರು ಚಿತ್ರಿಸುತ್ತಾರಾದರೂ, ಅದನ್ನು ಪುಷ್ಟೀಕರಿಸುವ ಅಂಶಗಳು ಸಾಕಷ್ಟು ಬೇಕಾಗಿತ್ತು ಎನಿಸುತ್ತದೆ. ಆದರೆ, ಇಲ್ಲಿ ಕಾದಂಬರಿಯನ್ನು ಇದ್ದಕ್ಕಿದ್ದಂತೆ ಅವಸರದಲ್ಲಿ ಮುಗಿಸಿದ ಭಾವನೆ ಬರುತ್ತದೆ ''[೧]

ಆಧುನಿಕ ಯುಗದಲ್ಲಿ ನಡೆಯುತ್ತಿರುವ ಬೆಳವಣಿಗೆಗಳನ್ನು ೧೨ನೇ ಶತಮಾನದ ಕಥೆಯೊಂದಿಗೆ ಸಮೀಕರಿಸಿಕೊಂಡು ಕಾದಂಬರಿಯಲ್ಲಿ ಲೇಖಕರು ಚಿತ್ರಿಸುತ್ತಾ ಹೋಗಿದ್ದಾರೆ. ಈ ಕೃತಿಯಲ್ಲಿ ಪ್ರಮುಖವಾಗಿ ಬಸವಣ್ಣನ ಜೀವನಕ್ಕೆ ಸಂಬಂಧಪಟ್ಟಂತೆ 'ಮಹಾಚೈತ್ರ' ದಲ್ಲಿ ಬಳಸಿದ ಪದ ಪ್ರಯೋಗಗಳನ್ನು ಇಲ್ಲಿ ಬಳಸಿಲ್ಲ. ಚೆನ್ನಬಸವಣ್ಣನ ತಾಯಿ ಅಕ್ಕ ನಾಗಮ್ಮನು ಆಶ್ರಮದಲ್ಲಿ ಗುರುಗಳ ಸೇವೆಯಲ್ಲಿದ್ದಾಗ ಕದ್ದುಮುಚ್ಚಿ ಬಸುರಿಯಾದಳೆಂದು ಮತ್ತು ಈ ವಿಚಾರ ತಿಳಿದ ಅಲ್ಲಿನ ಜನತೆ ಬಸವಣ್ಣನನ್ನು ಹಾಗೂ ಅಕ್ಕ ನಾಗಮ್ಮನನ್ನು ಬಹಿಷ್ಕಾರ ಹಾಕಿದರೆಂಬ ಹೇಳಿಕೆಗಳ ಘಟನೆಗಳನ್ನು ಲೇಖಕರು ತುಂಬಾ ಸೂಕ್ಷ್ಮವಾಗಿ ಜಾಣ್ಮೆಯಿಂದ ನಿರ್ವಹಿಸಿದಂತಿದೆ. ಆದುದ್ದರಿಂದಲೇ ಈ ರೀತಿಯ ಹೇಳಿಕೆ ಇರುವ ನಾಲ್ಕು ಅಥವಾ ಐದು ಪುಟಗಳು ಪ್ರಮುಖವಾಗಿ ಮುಟ್ಟುಗೋಲಿಗೆ ಕಾರಣವಾದ ಅಂಶಗಳಾಗಿವೆ. ಹೀಗೆ ಅಸ್ಪಷ್ಟ ರಚನೆಯಿರುವ ಈ ನಾಲ್ಕು ಪುಟಗಳನ್ನು ಲೇಖಕರು ಕೃತಿಯಿಂದ ಬಿಡುವುದಾದರೆ ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವುದಿಲ್ಲ ಮತ್ತು ಮುಂದಿನ ಪ್ರಕಟಣೆಗೂ ಅವಕಾಶ ನೀಡುತ್ತದೆ ಎಂದು ನ್ಯಾಯಾಲಯವು ತಿಳಿಸಿದಾಗ ಲೇಖಕರು ಒಪ್ಪಿಕೊಳ್ಳದೆ ಇದ್ದುದನ್ನು ನೋಡಬಹುದು.

ಆಧುನಿಕ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇದುವರೆಗೂ ರಚನೆಯಾಗಿರುವ ಪ್ರಸಿದ್ಧ ಕಾದಂಬರಿಗಳು ಸಹ ಸ್ತ್ರೀಕೇಂದ್ರಿತ ನೆಲೆಯಲ್ಲಿ ರಚನೆಯಾದವುಗಳೇ ಆಗಿವೆ. ಅದರಲ್ಲೂ ಮುಖ್ಯವಾಗಿ 'ಕಾನೂರು ಹೆಗ್ಗಡತಿ ', 'ಮಲೆಗಳಲ್ಲಿ ಮದುಮಗಳು ', 'ವೈಶಾಖ ', 'ಕುಸುಮ ಬಾಲೆ ', 'ಮುಂಜಾವು ', 'ಮುಕ್ತಿ ', 'ಸಂಸ್ಕಾರ ' ಮೊದಲಾದ ಕಾದಂಬರಿಗಳು ಹೀಗೆ ಮೈಲುಗಲ್ಲುಗಳಾಗಬಹುದಾದಂತಹ ಈ ಕಾದಂಬರಿಗಳನ್ನು ಇಂದು ನಾವು ದಾಟಿ ಬಂದಿದ್ದೇವೆ. ಮತ್ತು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ, ಪ್ರಾದೇಶಿಕವಾಗಿ ಈ ಕಾದಂಬರಿಗಳು ವಿಶಿಷ್ಟವಾಗಿವೆ. ಹೀಗೆ ರಾಜಕೀಯ, ಚಾರಿತ್ರಿಕ ಮನೋವೈಜ್ಞಾನಿಕ ಮೊದಲಾದ ರೀತಿಗಳಲ್ಲಿ ನಡೆದುಬಂದ ಕನ್ನಡ ಕಾದಂಬರಿ ಸಾಹಿತ್ಯ ಕ್ಷೇತ್ರವು ವಿಫುಲವಾಗಿದೆ. ಹೀಗಿರುವಾಗ ಐತಿಹಾಸಿಕ ಚೌಕಟ್ಟಿನಲ್ಲಿ ನೆಲೆನಿಲ್ಲಬಲ್ಲ ಕೃತಿಯಾಗಿ ಮೂಡಿಬಂದ 'ಧರ್ಮಕಾರಣ ' ಕೃತಿಯನ್ನು ೧೯೯೫ ರಲ್ಲಿ ವರ್ಷದ ಶ್ರೇಷ್ಠ ಕಾದಂಬರಿ

ಎಂದು ಘೋಷಿಸಿ ಕನ್ನಡ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಆಯ್ಕೆ ಮಾಡಿತ್ತು. ಇಂತಹ ಸಂದರ್ಭದಲ್ಲಿ ಮೂಲಭೂತವಾದಿಗಳು, ಸಂಪ್ರದಾಯವಾದಿಗಳು ಈ ಕೃತಿಯಲ್ಲಿ ಬಸವಣ್ಣನ ಹಾಗೂ ಅಕ್ಕ ನಾಗಮ್ಮನ ಚಾರಿತ್ರ್ಯವನ್ನು ತಿರುಚಲಾಗಿದೆ ಎಂದು ವಿರೋಧಿಸಿದ್[illegible] ಸ್ವತಃ ಲೇಖಕರೇ ಪ್ರಶಸ್ತಿಯನ್ನು ತಿರಸ್ಕರಿಸಿ ಸುಪ್ರೀಂ ಕೋರ್ಟ್ ಮೆಟ್ಟಿಲೇರಿದಾಗ, ಸುಪ್ರೀಂ ಕೋರ್ಟ್ ಸಹ ಹೈಕೋರ್ಟ್‌ನ ತೀರ್ಪನ್ನೇ ಎತ್ತಿಹಿಡಿದಿರುವುದು ಕಂಡುಬರುತ್ತದೆ.

ಪ್ರಸ್ತುತ ಸಂದರ್ಭದಲ್ಲಿ ಈ ಕಾದಂಬರಿಯನ್ನು ಅಧ್ಯಯನ ಮಾಡುವ ಅಗತ್ಯತೆ ಇದೆ ಎಂದು ಭಾವಿಸಿ ಮತ್ತೆ ಪುನರ್ ವಿಶ್ಲೇಷಣೆಗೆ ಒಳಗು ಮಾಡಿಕೊಂಡು ವಿಮರ್ಶಾ ಲೇಖನಗಳನ್ನು ಆಧರಿಸಿ ಪ್ರಸ್ತಾಪಿಸಿದ್ದೇನೆ. 'ಧರ್ಮಕಾರಣ'ವು ೧೨ನೇ ಶತಮಾನದ ವಚನ ಚಳುವಳಿಯ ನೇತಾರರಾದ ಬಸವಣ್ಣನವರ ಮತ್ತು ಬಿಜ್ಜಳರ ಜೀವನವನ್ನು ಆದರಿಸಿದ ಕೃತಿಯಾಗಿದೆ. ಸಮಕಾಲೀನತೆ ಯಾವಾಗಲೂ ಭವಿಷ್ಯದ ಭರವಸೆಗಳನ್ನು ನಿರ್ಮಿಸಲು ಭೂತವನ್ನು ಆಶ್ರಯಿಸಿದಂತೆ ಈ ಕಾದಂಬರಿಯೂ ಸಹ ಸಮಕಾಲೀನ ಸಮಾಜದ ಭವಿಷ್ಯವನ್ನು ರೂಪಿಸಲು ಮತ್ತು ಗಟ್ಟಿಯಾದ ನಿಲುವುಗಳನ್ನು ಭದ್ರಪಡಿಸಲು ಭೂತವನ್ನು (ಗತಕಾಲದ ವಚನ ಚಳುವಳಿಯ ಚರಿತ್ರೆ) ಆಶ್ರಯಿಸಿದಂತಿದೆ. ಹೀಗೆ ಆಶ್ರಯಿಸುವಾಗ ಚರಿತ್ರೆಯ ಘಟನೆಗಳನ್ನು ಸಮಕಾಲೀನತೆಯಿಂದ ಪುನರ್ ರಚಿಸುತ್ತಿರುತ್ತದೆ. ಈ ರೀತಿ ಪುನರ್ ರಚಿಸುವಾಗ ಚರಿತ್ರೆಗಳಲ್ಲಿನ ಕೆಲವು ಅಂಶಗಳಿಗೆ ಸಮಕಾಲೀನ ರೂಪವನ್ನು ಕೊಡುವುದು ಸ್ವಾಭಾವಿಕ. ಈ ಹಿನ್ನೆಲೆಯಲ್ಲಿ ಚರಿತ್ರೆಯ ಘಟನೆಗೆ ಸಮಕಾಲೀನತೆಯಿಂದ ಒಂದು ಹೊಸ ರೂಪ ಕೊಟ್ಟ ಕಾರಣಕ್ಕಾಗಿ ಈ ಕೃತಿಯು ವಿವಾದಗಳಿಗೆ ಒಳಗಾಯಿತು ಎಂದು ಗುರುತಿಸಬಹುದು.

> ''ಧರ್ಮಕಾರಣ' ಕಾದಂಬರಿಯನ್ನು ಕೋರ್ಟು ಎಂಬ ವಿಮರ್ಶಕ 'ಜಾನಪದ' ಹಾಗೂ 'ಚಾರಿತ್ರಿಕ ಸಾಕ್ಷ್ಯ' ಎಂಬ ಪದಗಳನ್ನು ವ್ಯಾಖ್ಯಾನಿಸಿದ ರೀತಿ ನಮ್ಮನ್ನು ಬೆಚ್ಚಿಸುವಂತಿದೆ. 'ಧರ್ಮಕಾರಣ' ಕಾದಂಬರಿಯ ಪರವಾಗಿ ವಾದಿಸಿದ ಲಾಯರ್, ತಮ್ಮ ವಾದದ ಸಮರ್ಥನೆಗೆಂದು ಜಾತಿಯನ್ನು ಮೀರುವ ಬಗೆಗಿನ ಬಸವಣ್ಣನವರ ವಚನವೊಂದನ್ನು ಉಲ್ಲೇಖಿಸಿದ ತಕ್ಷಣ ನ್ಯಾಯಾಧೀಶರೊಬ್ಬರು ಮಾಡಿದ ಆಕ್ಷೇಪಣೆ ಇದು: " That is Folk Knowledge ; ಚಾರಿತ್ರಿಕ ಸಾಕ್ಷ್ಯ ಇದ್ದರೆ ಕೊಡಿ'' ಬಸವಣ್ಣನವರು ಹೇಳಿದ್ದು 'ಜಾನಪದ ಜ್ಞಾನ ';ಆದ್ದರಿಂದ ಅದು 'ನಿಷ್ಪ್ರಯೋಜಕ ' ಎಂದು ತೀರ್ಮಾನಿಸುವ ಕಾನೂನಿನ ಭಾಷೆಯ ವಿರುದ್ಧ ಸಾಹಿತ್ಯ ವಿಮರ್ಶೆ ಎಂದಾದರೂ ಹೋರಾಡುವುದು ಸಾಧ್ಯವೇ ? ''[೨] ಎಂದು ವಿಮರ್ಶಾ ಲೇಖಕರೊಬ್ಬರು ಪ್ರಶ್ನೆಯನ್ನು ಎತ್ತಿದ್ದಾರೆ. ಇಂತಹ ಕೃತಿಯೊಂದನ್ನು ಹತ್ತಿರದಿಂದ ಓದಿದರೆ ಇಲ್ಲಿ

ವಿವಾದಕ್ಕೆ ಒಳಗಾಗುವಂತಹ ವಿಚಾರಗಳಾಗಲೀ, ಹೇಳಿಕೆಗಳಾಗಲೀ ಎಲ್ಲಿಯೂ ಒಡಮೂಡುವುದಿಲ್ಲ. ಬಸವಣ್ಣನವರ ಚಳುವಳಿಯನ್ನೇ ಕೇಂದ್ರವಾಗಿಟ್ಟುಕೊಂಡು ರಚನೆಯಾದ ಕೃತಿಗಳಿಗಿಂತ ಈ ಕಾದಂಬರಿ ಭಿನ್ನವಾದದ್ದು ಅದರ ವಸ್ತುವಿನ ಆಯ್ಕೆಯಲ್ಲಿ. ಇಲ್ಲಿನ ಕಾಲ, ಚಳುವಳಿ, ಸಮಾಜ ಚಳುವಳಿಯ ಪ್ರಭಾವ, ಪರಿಣಾಮಗಳು 'ಸಂಕ್ರಾಂತಿ', 'ತಲೆದಂಡ' ಮತ್ತು 'ಮಹಾಚೈತ್ರ' ನಾಟಕಗಳಲ್ಲಿ ಮುಖ್ಯವಾದಂತೆ ಕಾದಂಬರಿಗೆ ಅವು ಇಲ್ಲಿ ಮುಖ್ಯವಲ್ಲ. ಹೀಗಾಗಿ ಈ ನಾಟಕಗಳಲ್ಲಿ ನಾವು ನೋಡುವಂತಹ ಸಂದಿಗ್ಧ ವಾತಾವರಣ ಮತ್ತು ಕಲ್ಯಾಣದಲ್ಲಿ ಶರಣರ ಹಾಗೂ ಸಾಮಾನ್ಯ ಜನರ ರಕ್ತಪಾತ ಮುಂತಾದ ಭೀಕರ ಘಟನೆಗಳ ಚಿತ್ರಣ ಎದ್ದು ಕಾಣುತ್ತದೆ. 'ಸಂಕ್ರಾಂತಿ'ಯಲ್ಲಿ ಉಜ್ಜನ ಮಗ ರುದ್ರ ಬ್ರಾಹ್ಮಣರ ಕನ್ಯೆಯನ್ನು ಪ್ರೀತಿಸಿದ ಎಂಬ ಒಂದೇ ಕಾರಣಕ್ಕಾಗಿ ಬಿಜ್ಜಳನು ಬಸವಣ್ಣನ ಸಮ್ಮುಖದಲ್ಲಿ ಘೋರ ಶಿಕ್ಷೆಗೆ ರುದ್ರನನ್ನು ಒಳಪಡಿಸುತ್ತಾನೆ. ಅದೇ ರೀತಿ 'ತಲೆದಂಡ' ನಾಟಕದಲ್ಲಿಯೂ ಕ್ರಾಂತಿಯಲ್ಲಿ ತೊಡಗಿದ ಶಿವಶರಣರು ಬಿಜ್ಜಳನ ತಲೆಯನ್ನು ಮುಗ್ಧ ಶರಣರನ್ನು ಶಿಕ್ಷಿಸಿದ್ದಕ್ಕಾಗಿ ದಂಡವಾಗಿ ಪಡೆಯುತ್ತಾರೆ. ಇಲ್ಲಿಯೂ ಸಹ ರಕ್ತಪಾತಗಳು ನಡೆಯುತ್ತವೆ. ಆದರೆ ಈ ಕಾದಂಬರಿಯ ವಸ್ತುವಲ್ಲಿ ಇಂತಹ ರಕ್ತಪಾತಗಳು ನಡೆಯುವ ಸನ್ನಿವೇಶವೇ ಇಲ್ಲ. ಇಲ್ಲಿ ಸರಳವಾಗಿ, ಸ್ಪಷ್ಟವಾಗಿ ಕಥೆ ನಿರೂಪಿತವಾಗುವುದರ ಮೂಲಕ ಬಸವಣ್ಣನು ಕಲ್ಯಾಣ ನಗರವನ್ನು ಬಿಡುವಲ್ಲಿಗೆ ಕಾದಂಬರಿಯ ಕಥೆ ಮುಗಿದರೆ, ಇದಕ್ಕೆ ವಿರುದ್ಧವಾಗಿ 'ಮಹಾಚೈತ್ರ' ನಾಟಕದಲ್ಲಿ ಬಸವಣ್ಣನು ಕಲ್ಯಾಣದಿಂದ ಹೊರಟ ನಂತರದ ಕಲ್ಯಾಣ ಕ್ರಾಂತಿಯ ಕಥಾವಸ್ತುವಾಗಿದೆ.

ಲೇಖಕರು ಇಲ್ಲಿ ಬಸವಣ್ಣನವರ ಬದುಕು ಅರಳಿದ ಬಗೆಯನ್ನು ಚಿತ್ರಿಸುವುದಷ್ಟೇ ಅಲ್ಲದೆ, ತನ್ನ ಸುತ್ತಲಿನ ಪರಿಸರ, ಸಮಾಜವನ್ನು ಬಸವಣ್ಣ ಪರಿವರ್ತಿಸಿದ ಬಗೆಯನ್ನೂ ಸಹ ತಿಳಿಸಿದ್ದಾರೆ. ಇಂದಿನ ಸಾಮಾಜಿಕ, ಮಾನವೀಯ ಮೌಲ್ಯಗಳು ಬದಲಾದ ಬಗೆಯನ್ನು ಚಿತ್ರಿಸುವುದರ ಮೂಲಕ ಮತ್ತೆ ಸಮಕಾಲೀನ ಸಮಾಜಕ್ಕೆ ಶರಣರ ಜೀವನ ಮೌಲ್ಯಗಳನ್ನು ಎತ್ತಿ ಹಿಡಿದಿದ್ದಾರೆ. ಈ ಕಾದಂಬರಿಯಲ್ಲಿ ಬಸವಣ್ಣನು ಕಲ್ಯಾಣದಿಂದ ಕೂಡಲ ಸಂಗಮಕ್ಕೆ ಹೋದ ನಂತರ ಕಲ್ಯಾಣದಲ್ಲಿ ಏನಾಯಿತು ಎಂಬುದಕ್ಕೆ ಇಲ್ಲಿ ಉತ್ತರವಿಲ್ಲ. ಬಸವಣ್ಣನಿಲ್ಲದ ಕಲ್ಯಾಣದಲ್ಲಿ ನಡೆಯುವುದಾದರೂ ಏನು? ಎಂಬುದನ್ನು ಮನಗಂಡ ಲೇಖಕರು ಕಾದಂಬರಿಯ ಕಥೆಯನ್ನು ಅಲ್ಲಿಗೇ ನಿಲ್ಲಿಸಿರುವುದು ಒಂದು ರೀತಿ ತಾರ್ಕಿಕವಾಗಿ ಸಮರ್ಪಕವೆನಿಸುತ್ತದೆ.

ವಿಜಾತಿಯ ವಿವಾಹದ ವಿರುದ್ಧ ಬಂಡೆದ್ದ ಸಂಪ್ರದಾಯವಾದಿ ಶರಣರು ಕಲ್ಲಿನಾಥನೆಂಬ ಶರಣನ ಮುಂದಾಳತ್ವದಲ್ಲಿ ಕಲ್ಯಾಣದ ಮಾದಾರಕೇರಿಗೆ ಬೆಂಕಿಯಿಟ್ಟು

ಸುಡುತ್ತಾರೆ. ಶರಣ ಸಂಕುಲದದಲ್ಲಿಯೇ ಅದರಲ್ಲಿಯೂ ಪರಸ್ಪರರಲ್ಲಿಯೆ ಒಂದು ಅಪನಂಬಿಕೆ ಹುಟ್ಟಿಕೊಂಡಿದೆ. ಜೊತೆಗೆ ಬ್ರಾಹ್ಮಣ ಸಮಾಜದಲ್ಲಿ ಅವರ ಬಗ್ಗೆ ತೀವ್ರ ಕೋಪ, ಇವುಗಳಿಂದ ಒಂದು ಪ್ರಕ್ಷುಬ್ಧ ವಾತಾವರಣ ಸೃಷ್ಟಿಯಾಗಿದೆ. ಸಮಾನತೆಯನ್ನು ಎತ್ತಿಹಿಡಿಯುವ ಜಾತಿ ಪದ್ಧತಿಯನ್ನು ತೀವ್ರವಾಗಿ ವಿರೋಧಿಸುವ ಶರಣ ಸಮಾಜ ಜಾತಿ ಪದ್ಧತಿಯ ಒಂದು ಘಟನೆಯಿಂದಲೇ ವಿವಾದಕ್ಕೆ ಒಳಗಾಯಿತು ಎನ್ನುವುದು ಎಂತಹ ವೈಪರೀತ್ಯ. ಹೀಗೆ ಹೊಸ ಪಂಥಗಳು ಈ ಸಮಸ್ಯೆಯನ್ನು ಒಂದಲ್ಲ ಒಂದು ದಿನ ಎದುರಿಸಿ ನಾಶವಾಗುತ್ತವೆ. ಈ ಹೊಸ ಪಂಥಕ್ಕೆ ಸೇರಿದ ಮೇಲ್ವರ್ಗದವರು ಮೇಲ್ವರ್ಗದವರಾಗಿಯೇ ಇರುವುದು ನಮ್ಮ ನಾಡಿನ ದುರ್ದೈವ ಎಂದು ಹೇಳಬಹುದು. ಜಾತಿ, ಧರ್ಮಗಳು ನಮ್ಮ ವೈಚಾರಿಕತೆಯನ್ನು ಎಷ್ಟರ ಮಟ್ಟಿಗೆ ಹಿಡಿದಿಟ್ಟಿವೆ ಎಂದರೆ ಇತ್ತೀಚಿನ ದಲಿತ, ಕ್ರಿಶ್ಚಿಯನ್ನರ ಆರಕ್ಷಣಾ ವಿವಾದದಲ್ಲಿಯೂ ಇದನ್ನು ಕಾಣಬಹುದು. ಇಂದು ದೇಶದಾದ್ಯಂತ ಮಸೀದಿಗಳನ್ನು , ಚರ್ಚ್‌ಗಳನ್ನು (ದೇವಾಲಯಗಳನ್ನು )ಧ್ವಂಸ ಮಾಡುತ್ತಿರುವುದಾದರೂ ಯಾವ ಉದ್ದೇಶಕ್ಕಾಗಿ ? ಏಕದೇವತಾರಾಧನೆಯನ್ನು ಪ್ರತಿಪಾದಿಸಿದ ಶರಣರು ಪೂರ್ಣವಾಗಿ ಜಾತಿಯನ್ನು ತೊಡೆದು ಹಾಕಲು ತಮ್ಮ ಜೀವವನ್ನೇ ನೀಡಿದವರು. ದುರದೃಷ್ಟಕರವಾದ ಸಂಗತಿಯೆಂದರೆ ಬಸವಣ್ಣನು ಚಿಕ್ಕ ವಯಸ್ಸಿನಲ್ಲಿಯೇ ಐಕ್ಯವಾದದ್ದು. ಈ ಕಾದಂಬರಿಗೆ ಮುಖ್ಯವಾದ ಕಥೆ ೧೨ನೇ ಶತಮಾನದಲ್ಲಿ ನಡೆದ ಅಂತರ್ಜಾತಿಯ ವಿವಾಹದ ಕಥೆ. ಕೇತಗ - ಚಂದಲೆಯರ ಮದುವೆಯನ್ನು ಕೇಂದ್ರವಾಗಿಟ್ಟುಕೊಂಡು ಬಸವಣ್ಣನವರ ಬದುಕು ಅರಳಿದ ಬಗೆಯನ್ನು ಚಿತ್ರಿಸಲು ಹೊರಟಂತಿದೆ. ಬಸವಣ್ಣ ತನ್ನ ವೈಚಾರಿಕ ಗುಣಗಳಿಂದ ಪಡೆದುಕೊಂಡ ಚೈತನ್ಯವನ್ನು ಸಮಾಜಮುಖಿಯಾಗಿ ತೊಡಗಿಸಿಕೊಂಡು ಒಂದೊಂದೇ ಸ್ಥಾನವನ್ನು ಅಲಂಕರಿಸಿ ಮೇಲೇರಿದ ಬಗೆಯನ್ನು ಕಾದಂಬರಿಕಾರರು ಸತ್ವಪೂರ್ಣವಾಗಿ ನಿರೂಪಿಸಿದ್ದಾರೆ. ಅರಳಯ್ಯನ ಮಗ ಕೇತಗ ಮತ್ತು ಮಧುವಯ್ಯನ ಮಗಳು ಚಂದಲೆಯರಿಬ್ಬರು ಪ್ರೀತಿಸಿ ತಮ್ಮ ತಂದೆ -ತಾಯಿಗಳ ಒಪ್ಪಿಗೆಯಿಂದ ಹಾಗೂ ಬಸವಾದಿ ಶರಣರ ಒಪ್ಪಿಗೆ ಪಡೆದು ಅವರ ಸಮ್ಮುಖದಲ್ಲಿಯೇ ಧರ್ಮದ ಕಟ್ಟಳೆಗಳನ್ನು ಕಡೆಗಣಿಸಿ ವೀರಶೈವ ಧರ್ಮದ ತತ್ವಗಳ ಆಧಾರದ ಮೇಲೆ ಮದುವೆಯಾದದ್ದು ಕಲ್ಯಾಣ ಕ್ರಾಂತಿಗೆ ಕಾರಣವಾದ ವಸ್ತುವಾಗಿದೆ. ಇದರಿಂದ

> ''ಕಂದಾಚಾರದ ಸಂಪ್ರದಾಯವಾದಿ ಸಮಾಜ ಮಾತ್ರವಲ್ಲ , ಕ್ರಾಂತಿಯಾಗಬೇಕೆಂದು ಹಂಬಲಿಸುತ್ತಿದ್ದ ಶರಣ ಸಮಾಜ ಕೂಡ ಅದನ್ನು ವಿರೋಧಿಸುವುದು, ಅದರಿಂದುಂಟಾದ ರಕ್ತಪಾತ, ಸಾಮಾನ್ಯ ಜನರಲ್ಲಿ ಉಂಟು ಮಾಡಿದ ಭಯ, ಆತಂಕಗಳ ಚಿತ್ರಣ ಇಲ್ಲಿದೆ. ಲೇಖಕರೇ ಹೇಳುವಂತೆ 'ಸಮಾಜ ಏಣಿಯ ಮೊದಲ ಮತ್ತು ತುತ್ತ ತುದಿಯಲ್ಲಿರುವ

ನಡುವೆ ನಡೆಯುವ ಸಂಬಂಧವಿದು 'ಆದುದ್ದರಿಂದ ಇಲ್ಲಿ ಘರ್ಷಣೆ ಅನಿವಾರ್ಯವಾಗಿದೆ ''[೩]

ಇದೇ ರೀತಿ ಈ ಕೃತಿಯು ಮುಟ್ಟುಗೋಲಿಗೆ ಬೇಸತ್ತ ಲೇಖಕರೊಬ್ಬರು ಈ ಕಾದಂಬರಿಯ ಬಗೆಗೆ ಇರುವ ತಮ್ಮ ಕಾಳಜಿಯನ್ನು

'' ಈ ಕಾದಂಬರಿಯ ಸಾಹಿತ್ಯಕ ಮೌಲ್ಯದ ಪ್ರಶ್ನೆಗೂ ಹುಸಿ ಧಾರ್ಮಿಕರ ಕ್ಷುದ್ರ ಹಿತಾಸಕ್ತಿಗಳಿಂದ ಹುಟ್ಟಿರುವ ಪ್ರಶ್ನೆಗಳಿಗೂ ಸಂಬಂಧವಿಲ್ಲ. ಈಗಾಗಲೇ ಘೋಷಿತವಾಗಿರುವ ಪ್ರಶಸ್ತಿಯನ್ನು ಕೊಟ್ಟು ಮಾನ ಉಳಿಸಿಕೊಳ್ಳುವುದೊಂದೇ ಅಕಾಡೆಮಿಗೆ ಉಳಿದಿರುವ ಮಾರ್ಗ (ಮಾರ್ಚ್ ೫, ೧೯೯೭)''[೪] ಹೀಗೆ ವ್ಯಕ್ತಪಡಿಸಿರುವರು.

'ನನಗಿಂತಲೂ ಮುಂಚೆ ಎಷ್ಟೋ ಮಂದಿ ಪ್ರಚಂಡರು ಹುಟ್ಟಿಬರಲಿಲ್ಲ ? ಅವರೆಲ್ಲಾ ನನಗಿಂತಲೂ ಅಮೋಘವಾದದ್ದನ್ನು ಮಾಡಿಹೋದರೂ ಪ್ರಪಂಚವೇಕೆ ಹೀಗಿದೆ ಅನ್ನಿಸುತ್ತದೆ. ಇದು ಅವರ ತಪ್ಪಿನಿಂದಾದ್ದಲ್ಲ. ಈ ಜಗತ್ತಿನ ಹಣೆಬರಹವೇ ಇಷ್ಟೇ ಏನೋ ?' (ಪುಟ-೯೪) ಎನ್ನುವಲ್ಲಿ ಬಸವಣ್ಣನಿಗೆ ಈ ಜನರ ಬಗೆಗೆ ಒಂದು ರೀತಿಯ ಅಸಮಾಧಾನವನ್ನು ಸೃಷ್ಟಿಸುತ್ತದೆ. ನನಗಿಂತಲೂ ಮುಂಚೆ ರಾಮ,ಕೃಷ್ಣ, ಮುಹಮದ್, ಬುದ್ಧ, ಮಹಾವೀರ ಹೀಗೆ ಅನೇಕ ಮಂದಿ ಸರ್ವಸಮಾನತೆಗಾಗಿ, ಮಾನವ ಕಲ್ಯಾಣಕ್ಕಾಗಿ ಹುಟ್ಟಿಬಂದು ಅಮೋಘವಾದ ಕಾರ್ಯಗಳನ್ನು ಮಾಡಿದರೂ ಸಹ ಮತ್ತೆ ಏಕೆ ಈ ಜಗತ್ತು ಹೀಗಿದೆ ? ಎಂದು ಬಸವಣ್ಣನು ತನ್ನನ್ನೇ ಪ್ರಶ್ನಿಸಿಕೊಂಡಿದ್ದಾನೆ. ಇದಕ್ಕೆ ಮುಖ್ಯವಾದ ಕಾರಣ ಅವರ ತಪ್ಪಿನಿಂದಾದ್ದಲ್ಲ. ಆ ತಪ್ಪುಗಳಿಗೆ ಹೊಣೆ ಈ ಜಗತ್ತಿನಲ್ಲಿ ಜೀವಿಸುತ್ತಿರುವ ಮತ್ತು ಬೆಳೆಯುತ್ತಿರುವ ಈ ಮಾನವ ಜನಾಂಗವೇ ಕಾರಣವೆಂದು ಹೇಳಿರುವುದು ನಿಜವಾಗಲೂ ಸತ್ಯವಾದ ಮಾತಾಗಿದೆ.

ಬಸವಣ್ಣ ಈ ಕಾದಂಬರಿಯಲ್ಲಿ ಹುಟ್ಟಿನಿಂದ ಬ್ರಾಹ್ಮಣನಾಗಿಯೇ ಇದ್ದಾನೆ. ಮತ್ತು ಆತನು ಬಾಲ್ಯದಲ್ಲಿದ್ದಾಗ ಈಶಾನ್ಯ ಯತಿಗಳ ಮತ್ತು ಇನ್ನಿತರ ಯತಿಗಳ ಹತ್ತಿರ ಬ್ರಾಹ್ಮಣ ತತ್ವಗಳನ್ನು ಅಭ್ಯಾಸ ಮಾಡಿದನು ಎಂಬುದನ್ನು ಈ ಲೇಖಕರು ಚಿತ್ರಿಸಿದ್ದಾರೆ. ಬಸವಣ್ಣನಿಗೇ ತಿಳಿಯದ ಹಾಗೆಯೇ ಬಸವಣ್ಣನ ಧರ್ಮದ ತತ್ವಗಳನ್ನು ಎತ್ತಿ ಹಿಡಿಯಲು ಮತ್ತು ಸಮಾಜ ಸುಧಾರಣೆಯ ಪರಿವರ್ತನೆಗಾಗಿ ಹರಳಯ್ಯ ಮತ್ತು ಮಧುವರಸರಿಬ್ಬರು ತಮ್ಮ ಮಕ್ಕಳ ಮದುವೆಗೆ ಮುಂದಾಗಿದ್ದಾರೆ. ಇವರು ಪರಸ್ಪರ ಒಪ್ಪಿಕೊಂಡು ಅನಂತರ ಬಸವಣ್ಣನ ಒಪ್ಪಿಗೆ ಪಡೆದುಕೊಳ್ಳಲು ಬಂದಾಗ ಬಸವಣ್ಣನು ಸಂತೋಷದಿಂದ ಒಪ್ಪಿಕೊಂಡಿದ್ದಾನೆ ಮತ್ತು

ಅನುಭವ ಮಂಟಪದಲ್ಲಿ ಮಾತುಕತೆ ನಡೆಸಿ ತೀರ್ಮಾನವನ್ನು ಕೈಗೊಳ್ಳಲು ಮುಂದಾಗುತ್ತಾನೆ. ಇಲ್ಲಿ ಕೆಲವರಿಂದ ಆಗಲೇ ಪರ -ವಿರೋಧಗಳು ಬಂದರೂ ಸಹ 'ಈಗ ಅದನ್ನು ಶರಣ ಧರ್ಮಕ್ಕೆ ಅನುಕೂಲವಾಗುವಂತೆ ಹೇಗೆ ನಡೆಸಬೇಕೆಂದು ತಾವು ತೀರ್ಮಾನಿಸಬೇಕು. ಮದುವೆಯಾಗುವುದು ಗಂಡು -ಹೆಣ್ಣುಗಳ ತೀರ್ಮಾನ, ಅದನ್ನು ಮಾಡಬೇಕೆನ್ನುವುದು ಅವರ ತಾಯಿ -ತಂದೆಯರ ತೀರ್ಮಾನ ' (ಪುಟ -೩೯) ಎಂದು ಬಸವಣ್ಣ ವಚನ ಚಳುವಳಿಯ ನಾಯಕನಾದರೂ ಸಹ ಎಲ್ಲರ ಒಪ್ಪಿಗೆಯನ್ನು ಪಡೆದು ಈ ಅಂತರ್ಜಾತಿಯ ವಿವಾಹ ಅಂದರೆ ಶರಣರ ಪ್ರಕಾರ ಇದು ಶರಣರ ಮದುವೆಯನ್ನು ಎಲ್ಲರ ಸಮ್ಮುಖದಲ್ಲಿಯೇ ನಡೆಸಲು ಮುಂದಾಗಿದ್ದಾನೆ.

ಆದರೆ, ಕೇತಗನ ಅಪಹರಣದ ಸುದ್ದಿ ಕೇಳಿ ಬಸವಣ್ಣನಷ್ಟೇ ಅಲ್ಲದೆ ಕೇತಗನ ತಂದೆ-ತಾಯಿ, ಚಂದಲೆಯ ತಂದೆಯಾದ ಮಧುವರಸನಿಗೂ ಸಹ ತಾವು ಕಟ್ಟಬೇಕೆಂದಿದ್ದ ಹೊಸ ಸಮಾಜದ ಕನಸು ಬಿದ್ದು ಹೋಯಿತೇನೋ ಎಂದೆನಿಸಿದಂತಿದೆ. ನಂತರ ಬಸವಣ್ಣನ ಮುಖಾಂತರ ಬಿಜ್ಜಳನಿಗೆ ದೂರು ಸಲ್ಲಿಸಿದಾಗ ಬಿಜ್ಜಳನು ಬೇಹುಗಾರರನ್ನು ನೇಮಿಸಿ ಕೇತಗನನ್ನು ಪತ್ತೆ ಹಚ್ಚಿದರೂ ಸಹ ಇಲ್ಲಿ ಕೇತಗನ ಮದುವೆ ನಡೆಯದಿರುವುದು ಲೇಖಕರಲ್ಲಿಯೇ ಒಂದು ರೀತಿ ಈ ಮದುವೆಗೆ ಅಸಮ್ಮತಿ ಇರುವುದನ್ನು ಸೂಚಿಸುವಂತಿದೆ. ಇದೇ ರೀತಿ 'ಸಂಕ್ರಾಂತಿ' ನಾಟಕದಲ್ಲಿಯೂ ಸಹ ರುದ್ರನ ಮದುವೆ ನಡೆಯುವುದಿಲ್ಲ. ಇಲ್ಲಿಯೂ ಸಹ ಬಸವಣ್ಣನ ಸಾಮಾಜಿಕ ವಿವಾಹದ ಕನಸು ಕನಸಾಗಿಯೇ ಉಳಿದಿದೆ.

''ಹೊಲೆಯ ಬ್ರಾಹ್ಮಣಿಯನ್ನು ಮದುವೆಯಾದರೇನಂತೆ, ಹೆಂಡದ ಮಡಕೆಯ ಹೊರಗೆ ತೊಳೆದಂತೆ '' ಎಂದು (ಪುಟ : ೬೧) ಬರೆದು ರಾಜನ ಗಮನಕ್ಕೆ ಬರುವಂತೆ ಕಟ್ಟಿದ್ದಾರೆ. ರಾಜನು ದೇವಸ್ಥಾನಕ್ಕೆ ಹೋಗಿ ಮತ್ತೆ ಅದೇ ದಾರಿಯಲ್ಲಿ ವಾಪಸ್ಸಾಗುವಾಗ ಅದೂ ರಾಜನ ಆಸ್ತಾನದಲ್ಲಿ ಕದ್ದ ರಾಜರು ಉಡುವ ಪೀತಾಂಬರದಲ್ಲಿಯೇ ಯಾರೋ ಈ ಮದುವೆಯನ್ನು ಸಹಿಸದವರು ಕದ್ದು ತಂದ ತುಂಡು ಬಟ್ಟೆಯಲ್ಲಿ ಬರೆದು ಮರಕ್ಕೆ ತೂಗು ಹಾಕಿರುವುದನ್ನು ನೋಡಬಹುದು. ಇದನ್ನು ಕಂಡ ರಾಜನ ಪರಿವಾರದವರು ರಾಜನಿಗೆ ತಿಳಿಸುವುದು. ಇದನ್ನು ನಾರಾಣಕ್ರಮಿತರಿಂದ ಓದಲು ಆಗದೆ ಮತ್ತೆ ಅದನ್ನು ಬಸವಣ್ಣನಿಂದಲೆ ತಿಳಿಯಲು ಆಸ್ತಾನಕ್ಕೆ ಕರೆಸಿ ಕೇಳಿ ತಿಳಿದುಕೊಳ್ಳುತ್ತಾನೆ. ಈ ವಿಷಯ ತಿಳಿದುಕೊಂಡು ತನಗೆ ಅರಿವಿಲ್ಲದೆಯೇ ಈ ಸಮಾಜದಲ್ಲಿ ಕ್ರಾಂತಿಯು ನಡೆಯುತ್ತಿದೆ ಎಂದು ಭಾವಿಸಿ ಗೂಡಾಚಾರಿಗಳನ್ನು ನೇಮಿಸುವುದು ಒಂದಕ್ಕೊಂದು ಹೊಂದಾಣಿಕೆ

ಇದ್ದಂತಿದೆ. ಆದರೆ ಲೇಖಕರು ಬಸವಣ್ಣ ಭಂಡಾರಿ ಪದವಿಗೆ ರಾಜೀನಾಮೆ ಕೊಟ್ಟು ಕಲ್ಯಾಣದಿಂದ ಹೊರ ನಡೆದ ಸಂದರ್ಭದಲ್ಲಿ ''ಬಸವಣ್ಣನವರು ಬಿಜ್ಜಳ ಪ್ರಭುಗಳ ಕೊಲೆಗೆ ಸಂಚು ನಡೆಸುತ್ತಿದ್ದಾರೆಂದು ಬಸವಣ್ಣನವರನ್ನು ಸೆರೆಗೊಳಿಸಲಾಗುವುದೆಂಬ ಮಾತುಗಳೇ ಎಲ್ಲರ ಬಾಯಲ್ಲಿಯೂ ಈ ಮಧ್ಯೆ ರಾಜಬೆಂಬಲಿಗರು ಬಸವಣ್ಣನವರ ಕೊಲೆಗೈಯ್ಯಲು ಸನ್ನಾಹ ನಡೆಸುತ್ತಿರಬಹುದು '' (ಪುಟ : ೧೬೧, ೧೬೨) ಎಂದು ಚಿತ್ರಿಸಿದ್ದಾರೆ. ಇಂತಹ ವಿಚಾರವನ್ನು ಸಾಹಿತ್ಯ ಕೃತಿಯಲ್ಲಿ ಚಿತ್ರಿಸಬಾರದೆಂದು ಈ ರೀತಿ ಅಭಿಪ್ರಾಯಪಡುತ್ತಾರೆ. ''ಇಂತಹ ಸುದ್ದಿಯನ್ನು ಹಬ್ಬಿಸುವ ಮೂಲಕ ಲೇಖಕನ ಬೌದ್ಧಿಕತೆ ಆಲೋಚನೆಯನ್ನು ಮೆಚ್ಚಲೇಬೇಕು. ಅಂತೆಯೆ ಲೇಖಕನು ಅದಕ್ಕೆ ಬೆನ್ನ ಹಿಂದೆಯೇ ಅದು ಒಂದು 'Rumour' ಮಾತ್ರ ಎಂಬುದನ್ನು ಸೂಚ್ಯವಾಗಿ ಸ್ಪಷ್ಟವಾಗುವಂತೆ ನಿರೂಪಿಸಬೇಕು. ಏಕೆಂದರೆ ಮುಂದೆಂದೋ ಒಂದು ದಿನ ಈ ಕೃತಿಯನ್ನು ವಚನ ಚಳುವಳಿ ಅಥವಾ ಬಸವಣ್ಣನವರ ಜೀವನ ತಿಳಿದಿಲ್ಲದ ವ್ಯಕ್ತಿ ಓದಿದರೆ ಇದು ನಿಜವೇ (?) ಎಂಬ ಮನೋಭಾವನೆ ಬೆಳೆಯಬಹುದು ''* ಈ ಕಾದಂಬರಿಯ ವಿವಾದಕ್ಕೆ ಕಾರಣವಾದ ಅಂಶಗಳಲ್ಲಿ ಪ್ರಮುಖವಾದದ್ದು ಅಕ್ಕನಾಗಮ್ಮನ ಜೀವನವನ್ನು ಕುರಿತು ಬರುವ ಎರಡು ಪ್ರಕರಣಗಳು ಎಂಬುದನ್ನು ಗುರುತಿಸಬಹುದು. ಇಲ್ಲಿನ ಚನ್ನಬಸವಣ್ಣನ ಜನ್ಮದ ರಹಸ್ಯವನ್ನು ಕುರಿತು ಅನೇಕ ವಿದ್ವಾಂಸರು ಅನೇಕ ರೀತಿಯಲ್ಲಿ ತಮ್ಮದೇ ಆದ ರೀತಿ -ನೀತಿಗಳಲ್ಲಿ ನಿರೂಪಿಸಿದ್ದಾರೆ.

ಶರಣರನ್ನು ಹಾಗೂ ವಚನ ಸಾಹಿತ್ಯವನ್ನು ರಕ್ಷಿಸಿದವ, ಧಾರ್ಮಿಕ, ನೈತಿಕ, ಸಾಹಿತ್ಯಕ ಹಾಗೂ ಸಾಮಾಜಕ ಕ್ರಿಯೆಯನ್ನುಗೈದವ ಹಾಗೂ ಕನ್ನಡದಲ್ಲಿ ಆಧ್ಯಾತ್ಮಿಕ ಸಾಹಿತ್ಯವನ್ನು ರಚಿಸಿದವ ಹೀಗೆ ಹಲವಾರು ರೀತಿಗಳಿಂದ, ಪ್ರೀತಿ ಗೌರವಗಳಿಂದ ಚೆನ್ನಬಸವಣ್ಣನನ್ನು ಬಸವಾದಿ ಶರಣರು, ಸೋಮನಾಥ ಆದಿಕವಿಗಳು ಮುಕ್ತ ಕಂಠದಿಂದ ಹೊಗಳಿದ್ದಾರೆ. ಆತನ ಬಹುಮುಖ ವ್ಯಕ್ತಿತ್ವಕ್ಕೆ ಹಾಗೂ ಕೋರೈಸುವ ಪ್ರತಿಭೆಗೆ ಮತ್ತು ಅಗಾಧವಾದ ಕರ್ತೃತ್ವ ಶಕ್ತಿಗೆ ಮಾರುಹೋದ ಕವಿಗಳು ಅವನು ಅಯೋನಿಜನೆಂಬ ಕಥೆ ಸೃಷ್ಟಿಸಿದ್ದಾರೆ. ಅವನನ್ನು ಕುರಿತು ಕನ್ನಡ, ತೆಲುಗು, ಸಂಸ್ಕೃತ ಭಾಷೆಗಳಲ್ಲಿ ಪುರಾಣಗಳನ್ನು ಬರೆದಿದ್ದಾರೆ. ಜಾನದಪ ಕವಿಯೊಬ್ಬನು ಆತನನ್ನು ''ಚಿನ್ಮಯಮೂರ್ತಿ, ಷಡುತಲಯ್ಯ '' ಎಂದು ಕರೆದಿದ್ದಾನೆ. ಆತನು ರಚಿಸಿರುವ ವಚನಗಳು ಮತ್ತು ಶಾಸ್ತ್ರ ಗ್ರಂಥಗಳು ವೀರಶೈವ ಧರ್ಮದ ಸಾರಸಂಗ್ರಹವಾಗಿವೆ ಎಂಬುದನ್ನು ಗುರುತಿಸಬಹುದು.

ಷಟ್‌ಸ್ಥಲ ಧರ್ಮದ ಸರ್ವಾಂಗಸುಂದರ ಸದನಕ್ಕೆ ಭಕ್ತಿನಿಧಿ ಬಸವಣ್ಣ ಬುನಾದಿಯಾದರೆ, ಜ್ಞಾನನಿಧಿ ಚೆನ್ನಬಸವಣ್ಣ ಅದರ ಕಟ್ಟಡ, ವೈರಾಗ್ಯನಿಧಿ ಅಲ್ಲಮಪ್ರಭು

ಇದರ ಕಳಶ ! ಹೀಗೆ ಭಕ್ತಿ, ಜ್ಞಾನ, ವೈರಾಗ್ಯಗಳ ಸಂಗಮವೇ ಈ ಷಟ್‌ಸ್ಥಲ ಸಿದ್ಧಾಂತದ ತತ್ವಗಳು. ಗುರು, ಲಿಂಗ, ಜಂಗಮರ ಸಾಕಾರ ಸ್ವರೂಪರಾಗಿರುವ ಈ ತ್ರಿಮೂರ್ತಿಗಳ ಚರಿತ್ರೆಗಳು ಬೇರ್ಪಡಿಸದ ರೀತಿಯಲ್ಲಿ ಇಂದು ಬೆರೆತು ಹೋಗಿವೆ. ಇವರು ಸಾಧಿಸಲು ಶ್ರಮಿಸಿದ ಮಾನವ ಕುಲೋದ್ಧಾರಕ ಕ್ರಾಂತಿ ಚಿರಸ್ಮರಣೀಯವಾಗಿದೆ. ಇವರು ಸಕಲ ಮಾನವ ಜೀವಾತ್ಮರಿಗೆ ಲೇಸನ್ನು ಬಯಸಿದ ಕುಲಜರಾಗಿದ್ದಾರೆ.

ಹೀಗೆ ಸಾಕಷ್ಟು ವಿಫುಲ ಸಾಹಿತ್ಯವು ಚೆನ್ನಬಸವಣ್ಣನನ್ನು ಕುರಿತು ಸೃಷ್ಟಿಯಾಗಿದ್ದರೂ ಅವನ ಜನನ, ಬಾಲ್ಯದ ರಹಸ್ಯವನ್ನು ಪೂರ್ಣ ಬೇಧಿಸಲು ಸಾಧ್ಯವಾಗಿಲ್ಲ. ಹಾಗೆಯೇ

> ''ಶಿವದೇವನು ಚೆನ್ನಬಸವಣ್ಣನ ತಂದೆ ಎಂದು ಹೇಳುವ ಕವಿಯೆಂದರೆ ಸಿಂಗಿರಾಜನೊಬ್ಬನೇ ಎಂಬ ವಾದವಿದೆ. ಶಿವದೇವನು ಚಾರಿತ್ರಿಕ ವ್ಯಕ್ತಿಯೋ ? ಅಥವಾ ಪೌರಾಣಿಕ ವ್ಯಕ್ತಿಯೋ ಎಂಬ ಅನುಮಾನಗಳು ಸಹ ಒಂದು ಕಾಲದಲ್ಲಿ ಇದ್ದು ಅದು ಈಗ ಶಿವಸ್ವಾಮಿಯು ಪೌರಾಣಿಕ ವ್ಯಕ್ತಿಯಲ್ಲ. ಬಸವಣ್ಣನ ಹಾಗೆಯೇ ಚಾರಿತ್ರಿಕ ವ್ಯಕ್ತಿಯೆಂದು ತಿಳಿದುಬಂದಿದೆ. ಪಾಲ್ಕುರಿಕೆ ಸೋಮನಾಥ, ಭೀಮಕವಿ, ಗುಬ್ಬಿಮಲ್ಲಣಾರ್ಯ, ಷಡಕ್ಷರದೇವ, ವಿರೂಪಾಕ್ಷ ಪಂಡಿತ ಮೊದಲಾದ ಕವಿಗಳು ಶಿವದೇವನ ಹೆಸರನ್ನು ತಮ್ಮ ಕಾವ್ಯಗಳಲ್ಲಿ ಪ್ರಸ್ತಾಪಿಸಿ ಶಿವದೇವನು ಚಾರಿತ್ರಿಕ ವ್ಯಕ್ತಿ ಶರಣ''[೫]

ಎಂದು ಹೇಳಿದ್ದಾರೆ ಎಂಬ ಈ ಹೊಸ ವಿಷಯ ಹಾಗೂ ಈ ಹೇಳಿಕೆಗಳನ್ನು ಹೆಚ್ಚಾಗಿ ತಿಳಿಯಲು ನಾವು ಅನ್ನದಾನಯ್ಯ ಪುರಾಣಿಕರ 'ಷಟ್‌ಸ್ಥಲ ಚನ್ನಬಸವಣ್ಣ' ಎಂಬ ಕೃತಿಯಲ್ಲಿ ವಿವರಣೆ ಇರುವುದನ್ನು ನೋಡಬಹುದು.

ದೇವಾಲಯಗಳ, ಸಂಪ್ರದಾಯಗಳ ಹಾಗೂ ಪುರೋಹಿತಶಾಹಿಗಳ ವಿರುದ್ಧ ಹೋರಾಡಿದ ಈ ಸಾಮಾಜಿಕ ನಾಯಕರು ಏಕದೇವೋಪಾಸನೆಯನ್ನು, ಶ್ರಮಗೌರವ ಭಾವನೆಯನ್ನು , ಸೇವಾಬುದ್ಧಿಯನ್ನು ಮತ್ತು ಸತ್‌ಚಾರಿತ್ರ್ಯವನ್ನು ಬೋಧಿಸಿದವರಾಗಿದ್ದಾರೆ. 'ದಯವೇ ಧರ್ಮದ ಮೂಲ', 'ಆಚಾರವೇ ಸ್ವರ್ಗ', 'ದೇಹವೇ ದೇವಾಲಯ (ದೇಗುಲ)', 'ಕಾಯಕವೇ ಕೈಲಾಸ ', 'ಅರಿವೇ ಗುರು' ಎಂದೂ ಹೇಳಿದ್ದಾರೆ. ಇವರ 'ಮೃದು ವಚನಗಳೇ ಜಪತಪಗಳು '. 'ಮನದ ಮುಂದನ ಆಸೆಯೇ ಮಾಯೆ', ಇಂತಹ ಅಮೃತ ತತ್ವಗಳನ್ನು ಲೋಕಕ್ಕೆ ನೀಡಿದ ಈ ವಚನಕಾರರು ನಾಡಿಗೆ ಅಷ್ಟೇ ಅಲ್ಲದೆ ವಿಶ್ವಕ್ಕೇ ಗುರುಗಳಾಗಿದ್ದಾರೆ. ಷಟ್‌ಸ್ಥಲ, ಪಂಚಾಚಾರ ಮತ್ತು ಸಪ್ತ ಆಚಾರಗಳನ್ನು ಕುರಿತು ಸಾವಿರಾರು ವಚನಗಳನ್ನು ಷಟ್‌ಸ್ತಲ ಭಾಷಾಕಾರನಾದ ಚನ್ನಬಸವಣ್ಣನು ರಚಿಸಿದ್ದಾನೆ. ಈ ಕಾರಣದಿಂದಾಗಿಯೇ ಆತನ ವಚನಗಳು ಧರ್ಮದ ಸಂಪ್ರದಾಯಗಳ ಆಚರಣೆ, ವಿಧಿ

-ವಿಧಾನಗಳು ಮುಂತಾದ ತತ್ವ ಸಿದ್ಧಾಂತಗಳ ವಿವರವಾದ ವಿವರಗಳನ್ನು ಒಳಗೊಂಡಿವೆ ಎಂದು ಹೇಳಬಹುದು. ಅಂದು ಜಗವೇ ಕಂಡರಿಯದ ಶೂನ್ಯ ಸಿಂಹಾಸನವನ್ನು ಸೃಷ್ಟಿಸಿದ ಕೀರ್ತಿ ಚೆನ್ನಬಸವಣ್ಣನದು.

ಈ ಕಾದಂಬರಿಯಲ್ಲಿ ವಿವಾದಕ್ಕೆ ಒಳಗಾಗಿರುವ ಪ್ರಮುಖ ಅಂಶ ಅಕ್ಕನಾಗಮ್ಮ-ಚೆನ್ನಬಸವಣ್ಣನಿಗೆ ತಂದೆ ಯಾರು ಎಂದು ತಿಳಿಯದ ರೀತಿಯಲ್ಲಿ ತಾಯ್ತನವನ್ನು ಕೊಟ್ಟ ಹಿನ್ನೆಲೆಯಾಗಿದೆ. ಇಡೀ ಕಾದಂಬರಿಯ ೧೯ ಪ್ರಕರಣಗಳಲ್ಲಿ ಅಕ್ಕನಾಗಮ್ಮನ ಪ್ರಸ್ತಾಪ ಬಸವಣ್ಣನನ್ನು ಗುರುತಿಸಿದ ಎಲ್ಲಾ ಪ್ರಸಂಗಗಳಲ್ಲೂ ಬಂದರೂ, ಅವಳ ಜೀವನಕ್ಕೆ ಸಂಬಂಧಿಸಿದ ಹೊಸ ತಿರುವುಗಳನ್ನು ೧೨ ಮತ್ತು ೧೫ನೇ ಪ್ರಕರಣಗಳಲ್ಲಿ ಕಾಣಬಹುದು. ಈ ಪ್ರಸಂಗವನ್ನು ಕುರಿತು ಲೇಖಕರೊಬ್ಬರು,



> "ಈ ಕಾದಂಬರಿಯಲ್ಲಿ ಅಕ್ಕನಾಗಮ್ಮನ ಪ್ರಸಂಗ ಸ್ತ್ರೀಪರವಾದ ನಿಲುವುಗಳನ್ನು ಹೊಂದಿರುವುದು ಸ್ಪಷ್ಟವಾಗಿಯೇ ಇದೆ. ಅಕ್ಕ ನಾಗಮ್ಮ ಮತ್ತು ಬಸವಣ್ಣ ಅನಾಥರಾದ ಮೇಲೆ ಅವರ ತಂದೆಯ ಆತ್ಮೀಯರಾದ ವಿಶ್ವೇಶ್ವರ ಸೋಮಯಾಜಿಗಳು ಅವರನ್ನು ಆರೈಕೆ ಮಾಡುತ್ತಾರೆ. ಇಲ್ಲಿ ನಾಗಮ್ಮ ಯಾರ ಸಹವಾಸ ಮಾಡಿದ್ದಾಳೆ ಎನ್ನುವುದಕ್ಕೆ (ವಯಸ್ಸಿನ ಕಾರಣವೂ ಇರಬಹುದು ) ಇಡೀ ಕಾದಂಬರಿಯಲ್ಲಿ ದಾಖಲೆ ಇಲ್ಲ, ಅಷ್ಟಾಗಿ ಅವಳು ತಂದೆಯಿಲ್ಲದ ಮಗುವಿಗೆ ತಾಯಿಯಾಗಿದ್ದಾಳೆ. ಅದೂ ಚೆನ್ನಬಸವಣ್ಣನಂತಹ ವ್ಯಕ್ತಿಗೆ. ವೀರಶೈವ ಪರಿಭಾಷೆಯಲ್ಲಿ ಹೇಳುವುದಾದರೆ 'ಶ್ರೇಷ್ಠ ಶರಣ 'ನಿಗೆ ಜನ್ಮ ನೀಡಿದ್ದಾಳೆ. ಇಂತಹ ಕಾರಣದಿಂದ ಈ ಕಾಲದ ತಮ್ಮನ್ನು ಪ್ರಶ್ನಿಸಿಕೊಳ್ಳಲಾಗದ ಅನೇಕ ಜಾತಿವಾದಿಗಳಿಗೆ ನೋವುಂಟು ಮಾಡಿರುವ ಪ್ರಸಂಗವಿದು"[೬]

ಈ ಮೇಲೆ ಎತ್ತಲಾಗಿರುವ ವಿಚಾರಗಳಿಗೆ ತದ್ವಿರುದ್ಧವಾಗಿ ಅಕ್ಕನಾಗಮ್ಮನಿಗೆ ಶಿವಸ್ವಾಮಿ ಎಂಬ ಗಂಡನಿದ್ದನು ಎಂಬುದನ್ನು 'ಷಟ್‌ಸ್ಥಲ ಬ್ರಹ್ಮಿ ಚೆನ್ನಬಸವಣ್ಣ ' ಎಂಬ ಕೃತಿಯಲ್ಲಿ ಅನ್ನದಾನಯ್ಯ ಪುರಾಣಿಕ ಅವರು ಆಧಾರಗಳ ಸಹಿತ ನಿರೂಪಿಸಿರುವುದನ್ನು ನೋಡಬಹುದು.

> "ಚೆನ್ನಬಸವಣ್ಣನ ತಂದೆ ಶಿವದೇವನೆಂದು ಹೇಳಿರುವ ಏಕೈಕ ಕವಿ ಸಿಂಗಿರಾಜ. ಅವನು ತನ್ನ 'ಸಿಂಗಿರಾಜಪುರಾಣ'ದಲ್ಲಿ 'ಶಿವಸ್ವಾಮಿ' ಅಥವಾ 'ಶಿವದೇವನು ' ಚೆನ್ನಬಸವನ ತಂದೆ ಎಂದು ಸಾರಿದ್ದಾನೆ. ಈ ಕಾವ್ಯವು ಸಂಶೋಧಕರಿಗೆ ದಾರಿದೀಪವಾಗಿದೆ. ಶಿದೇವನು ಚೆನ್ನಬಸವನ ತಂದೆ ಎಂಬುದು ಇಂದು ಬಹುಸಮ್ಮತ ಅಭಿಪ್ರಾಯವಾಗಿದೆ. ಚೆನ್ನಬಸವನ ತಂದೆ ಶಿವದೇವನೆಂದು ಹೇಳಿರುವ ಸಿಂಗಿರಾಜನು ಶಿವದೇವನ

ಪೂರ್ವಾಪರವನ್ನು ಕುರಿತು ಏನನ್ನೂ ಹೇಳುವುದಿಲ್ಲ. ಶಿವದೇವನು ಎಲ್ಲಿಯವ ಈ ಪ್ರಶ್ನೆಗೆ ಉತ್ತರವನ್ನು ಹುಡುಕಲು ಊಹೆಯನ್ನು ಆಶ್ರಯಿಸದೆ ವಿಧಿಯಿಲ್ಲ ಎಂಬುದನ್ನು ತಿಳಿಸುತ್ತಾ,

ಮಾದಲಾಂಬೆಯ ತವರುಮನೆ ಇಂಗಳೇಶ್ವರ. ಬಲದೇವ ಮಂತ್ರಿ ಅವಳ ಸಹೋದರ. ತಮ್ಮ ಏಕಮಾತ್ರ ಪುತ್ರಿಯಾದ ಅಕ್ಕನಾಗಮ್ಮನನ್ನು ತಮ್ಮ ಸಮೀಪದ ಸಂಬಂಧಿಗೆ ಕೊಟ್ಟು ಮದುವೆ ಮಾಡಿರುವ ಸಾಧ್ಯತೆಯುಂಟು. ಅಕ್ಕನಾಗಮ್ಮನು ಮದುವೆಯಾದ ಮೇಲೆ ಇಂಗಳೇಶ್ವರಕ್ಕೆ ಹೋಗಿರುವುದನ್ನು ನೋಡಿದರೆ ಶಿವದೇವನು ಇಂಗಳೇಶ್ವರದವನಾಗಿರ ಬೇಕು. ಅವನು ಮಾದಲಾಂಬೆಯ ಕಿರಿಯ ಸಹೋದರನಾಗಿರಲೂಬಹುದು. ಶಿವದೇವನು ಕಲ್ಯಾಣದಲ್ಲಿ ಬಸವನ ಮಹಾಮನೆಯಲ್ಲಿ ಇದ್ದಂತೆ ತೋರುತ್ತದೆ. ಅಲ್ಲಿ ಆ ಮಹಾಮನೆಯ ವ್ಯವಸ್ಥಾಪಕನಾಗಿದ್ದನೆಂಬುದನ್ನು ಸಿಂಗಿರಾಜ ಪುರಾಣದ ೩೧ ಸಂಧಿ ಯಲ್ಲಿ ಮುಕ್ತವಾಗಿರುವ ಪ್ರಸಂಗವು ಆಧಾರವನ್ನು ಒದಗಿಸುತ್ತವೆ. ಶಿವಸ್ವಾಮಿಯ ಹೆಸರನ್ನು ಯಾರೂ ಹೇಳಿಲ್ಲ ಎಂದ ಮಾತ್ರಕ್ಕೆ ಅವನು ಇರಲೇ ಇಲ್ಲ ಎಂದು ಹೇಳಬಾರದು. ಅವನು ಕಾಯಕಯೋಗಿ ! ''[೭]

ಈ ಕಾದಂಬರಿಯಲ್ಲಿ ಪ್ರಸ್ತಾಪವಾಗಿರುವ ಚೆನ್ನಬಸವಣ್ಣನ ಜನ್ಮದ ರಹಸ್ಯವನ್ನು ಕುರಿತಂತೆ ಅನೇಕರು ತಮ್ಮ ಅಭಿಪ್ರಾಯಗಳನ್ನು ಅವರ ಸಾಧಕ -ಬಾಧಕತೆಯ ಹಿನ್ನೆಲೆಯಲ್ಲಿ ಚರ್ಚಿಸಿರುವುದನ್ನು ನೋಡಬಹುದು. ಅದರಲ್ಲಿ '' ಚೆನ್ನಣ್ಣ ವಾಲಿಕಾರ, ಚಿದಾನಂದಮೂರ್ತಿ ಹಾಗೂ ಕಲ್ಬುರ್ಗಿಯವರ ಅಭಿಪ್ರಾಯಗಳನ್ನು ಚರ್ಚಿಸುತ್ತಾ, ಕೆ.ಜಿ. ನಾಗರಾಜಪ್ಪನವರು 'ಶರಣರು -ಏಕಮುಖ ಚಿಂತಕರು ' (೧೯೮೫ : ೩೭) ಈ ಲೇಖನದಲ್ಲಿ ಚೆನ್ನಬಸವಣ್ಣನ ಜೀವನವನ್ನು ಕುರಿತಂತೆ ಪ್ರಸ್ತಾಪಿಸುತ್ತಾರೆ. ಆದರೆ ಇವರ ನಿಲುವು ಅಂತಿಮವಾಗಿ ಚೆನ್ನಬಸವಣ್ಣನ ತಂದೆ ಯಾರೆಂದು ತಿಳಿಯುವುದಿಲ್ಲ ಮತ್ತು ಅದರ ಅಗತ್ಯವೂ ಇಲ್ಲ ಎನ್ನುವುದನ್ನು ಸ್ಪಷ್ಟಪಡಿಸುವದರೊಂದಿಗೆ ಶರಣರ ಅನೇಕ ರೀತಿಯ ಏಕಮುಖ ಚಿಂತನೆಗಳನ್ನು ಚರ್ಚಿಸುತ್ತಾರೆ'' ಎಂದು ಬಿ.ಎನ್. ಮಂಜುಳಾರವರು (ಸಂಕ್ರಮಣ ಪತ್ರಿಕೆ) ಜುಲೈ ೧೯೯೭, ಪುಟ ೧೨) ತಿಳಿಸಿದ್ದಾರೆ.

ಇಲ್ಲಿ ಬಸವಣ್ಣನ ಮತ್ತು ಅಕ್ಕ ನಾಗಮ್ಮನ ಜೀವನದ ಕೆಲವು ವಿಚಾರಗಳ ಬಗೆಗೆ ಗೊಂದಲ, ಜಿಜ್ಞಾಸೆ ವಿಧ್ವಾಂಸರಲ್ಲಿಯೇ ಹುಟ್ಟಿಕೊಂಡಿದೆ. ಒಬ್ಬೊಬ್ಬ ವಿದ್ವಾಂಸರೂ ಸಹ ಒಂದೊಂದು ರೀತಿ ಚನ್ನಬಸವಣ್ಣನ ಜನನವನ್ನು ಅರ್ಥೈಸಿಕೊಂಡು ಅಭಿಪ್ರಾಯಗಳನ್ನು ಸೂಚಿಸಿದ್ದಾರೆ. ಅವರಲ್ಲಿ ಪ್ರಮುಖರಾದ ಅನ್ನದಾನಯ್ಯ ಪುರಾಣಿಕರು ಚನ್ನಬಸವಣ್ಣ ಎಂಬ ಕೃತಿಯಲ್ಲಿ ನೀಡಿರುವ ಹೇಳಿಕೆಯನ್ನು ಈ ರೀತಿ ನೋಡಬಹುದು. ''ಸಿಂಗಿರಾಜಪುರಾಣ (ಕ್ರಿ.ಶ.

೧೫೮೦)ದ ೫ನೇ ಸಂಧಿಯ ೧೧೭ನೇ ಪದ್ಯದಲ್ಲಿ 'ಸಂಸಾರ ಬ್ರಾಂತಳಿಯದಳಿಯ ಶಿವದೇವ ಮಗಳ್ನಾಗಾಯಿ ' ಯರನ್ನು ಬಸವಣ್ಣರ ಕರರಕ್ಷಣೆಗಾಗಿ ಕೂಡಲ ಸಂಗಮದಲ್ಲಿ ಬಿಟ್ಟು ಮಾದಿರಾಜ -ಮಾದಲಾಂಬಿಕೆಯರು ಬಾಗೇವಾಡಿಗೆ ಮರಳುತ್ತಾರೆ ಎಂಬ ಹೇಳಿಕೆ ಇದೆ. ಅದೇ ರೀತಿ ೩೧ನೇ ಸಂಧಿಯ ೨೧ನೇ ಪದ್ಯದಲ್ಲಿ ಬಸವನು ಪ್ರಧಾನಿ ಪದವಿಗೆ ರಾಜೀನಾಮೆ ನೀಡಿ ತನ್ನ ಅರಮನೆಗೆ ಬಂದ ನಂತರ ರಾಜಭಟರು ಬಂದು -

'' ಯುವತಿ ಗಂಗಾಂಬೆಯರ ನೀಲಲೋಚನೆಯವರ

ಕುವರ ಸಂಗಮನಕ್ಕನಾಗಾಯನವರ ಪತಿ

ಶಿವಸ್ವಾಮಿಗಳ ಚೆನ್ನಬಸವನಿವರಾಭರಣ ವಸ್ತ್ರಾದಿಗಳನ್ನು ತೆಗಿಸುತ್ತಾರೆ ''

ಈ ಪದ್ಯದಲ್ಲಿ ಅಕ್ಕನಾಗಾಯಿ ಪತಿ ಶಿವಸ್ವಾಮಿ ಬಸವನ ಪರಿವಾರದೊಂದಿಗೆ ಕಲ್ಯಾಣದಲ್ಲಿದ್ದನೆಂಬುದು ಸ್ಪಷ್ಟವಾಗುತ್ತದೆ '' ಈ ಹೇಳಿಕೆಯನ್ನು ಅನ್ನದಾನಯ್ಯ ಪುರಾಣಿಕ ಅವರು 'ಷಟ್‌ಸ್ಥಲ ಚನ್ನಬಸವಣ್ಣ' ಕೃತಿಯ 'ಅನುಬಂಧ 'ದಲ್ಲಿ ತಿಳಿಸಿದ್ದಾರೆ. ಅದೇ ರೀತಿ ಚನ್ನಬಸವಣ್ಣನ ಜೀವನದ ಹಿಂದಿನ ಘಟನೆಗಳು ಇಂದಿಗೂ ಸಹ ಪವಾಡಸದೃಶ್ಯವೇ ಆಗಿವೆ. ಚನ್ನಬಸವಣ್ಣನ ಸುತ್ತ ಇರುವ ದಂತಕತೆಗಳು ಹಲವು. ಅವುಗಳಲ್ಲಿ ಅಕ್ಕನಾಗಮ್ಮನು ತನ್ನದೊಂದು ವಚನದಲ್ಲಿ ಹೇಳಿಕೊಂಡಿರುವ ಒಂದು ವಚನವನ್ನು ಹೀಗೆ ಉದಾಹರಿಸಬಹುದು.

'' ಲಿಂಗದಿಂದ ರೇವಣ್ಣಸಿದ್ದರು, ಭಸ್ಮದಿಂದ ಸಿದ್ಧರಾಮಯ್ಯ, ಪಾದೋದಕದಿಂದ ಅಕ್ಕಮಹಾದೇವಿ, ಮಂತ್ರದಿಂದ ಬಸವಣ್ಣ, ಪ್ರಸಾದದಿಂದ ಚನ್ನಬಸವಣ್ಣ ಉದಯಿಸಿದರೆಂದು ಹೇಳುತ್ತಾಳೆ '' ಇಲ್ಲಿ ಬಸವಣ್ಣನು ಮಂತ್ರದಿಂದ ಜನಿಸಿದನೆಂದು ಹೇಳಿದ ಮಾತ್ರಕ್ಕೆ ಬಸವಣ್ಣನಿಗೆ ತಂದೆಯೇ ಇಲ್ಲವೆಂದು ವಾದಿಸಲಾಗದು. ಬಸವಣ್ಣನು 'ಮಂತ್ರಪುರುಷ' ಚನ್ನಬಸವಣ್ಣನು 'ಮಹಾಪ್ರಸಾದಿ' ಎಂಬುದರ ಸಂಕೇತವಾಗಿ ಈ ಪದಗಳನ್ನು ಬಳಸಿರಬಹುದೆಂದು ಗುರುತಿಸಬಹುದು. ಲೇಖಕರು ಈ ಕಾದಂಬರಿಯಲ್ಲಿ ''ಚನ್ನಬಸವಣ್ಣನ ಹುಟ್ಟಿನ ಪ್ರಸಂಗವನ್ನು ಸೃಷ್ಟಿಸುವಾಗ ಅನೇಕ ವೀರಶೈವರ ನಂಬಿಕೆಯಂತೆ 'ಪ್ರಸಾದ 'ದ ಕಲ್ಪನೆಯ ಆದಿಯಲ್ಲಿಯೇ ರಚಿಸಿದಂತಿದೆ, ಅಲ್ಲದೇ ಮಿಥ್‌ಗಳು, ದಂತಕಥೆಗಳು, ಮತೀಯ ಆಸಕ್ತಿಯ ದಾಖಲೆಗಳು, ಕಲ್ಪಿತ ಜಾತಕಗಳು ಸೃಷ್ಟಿಯಾಗಿರುವ ಪರಂಪರೆಯೇ ಇರುವ ಈ ನಾಡಿಲ್ಲಿ ಪಿ.ವಿ.ನಾರಾಯಣ ಅವರು ಯಾವುದೋ ಒಂದು ಪುರಾಣವನ್ನು ಆಧರಿಸಿ ಬರೆದಂತೆ ಕಂಡುಬರುತ್ತದೆ.'' ಎಂದು ಲೇಖಕರೊಬ್ಬರು ತಿಳಿಸಿದ್ದಾರೆ.

ಈ ಕಾದಂಬರಿಯಲ್ಲಿ ಸ್ವತಃ ಚೆನ್ನಬಸವಣ್ಣನವರೇ ಹೇಳುವ ಮಾತೊಂದಿದೆ.

''ಶಿವನ ಒಕ್ಕಲಿನವರು ನಾವು, ನಮ್ಮಲ್ಲಿ ಬೇಧವಿಲ್ಲ ...' ಹುಟ್ಟಿನಿಂದ ಬಂದ

ಗುರುತುಗಳೆಲ್ಲವನ್ನೂ ಬಿಟ್ಟು ಹೊಸ ಜಾತ್ಯಾತೀತ ವ್ಯಕ್ತಿತ್ವ ಪಡೆಯುವ ವೀರಶೈವ ಧರ್ಮದ ಅಂತಃಸತ್ವವನ್ನು ತಾತ್ವಿಕವಾಗಿಯಾದರೂ ಒಪ್ಪಿಕೊಂಡರೆ ಈ ವಿವಾದಗಳೇ ನಮ್ಮಲ್ಲಿ ಉದ್ಭವಿಸುದಿಲ್ಲ. ಈ ಕಾದಂಬರಿಯಲ್ಲಿ ಚೆನ್ನಬಸವಣ್ಣನನ್ನು (ಕೋ.ಚೆ.ಹೇಳುವಂತೆ) 'ಜಾರಿಣಿಯ ಮಗ ' ಎಂದು ಎಲ್ಲೂ ಕರೆದಿಲ್ಲ ಎಂದು ನಟರಾಜ್ ಹುಳಿಯಾರ್‌ರವರು ತಮ್ಮ 'ಗಾಳಿಬೆಳಕು ' ಕೃತಿಯಲ್ಲಿ ಹೇಳಿದ್ದಾರೆ. ಅದೇ ರೀತಿ ಲೀಲಾದೇವಿ ಪ್ರಸಾದ್, ಜತ್ತಿ, ಕೋ.ಚೆ. ಮೊದಲಾದವರು ಚೆನ್ನಬಸವಣ್ಣನವರು ಹೇಳುವ 'ಶಿವನ ಒಕ್ಕಲಿನವರು ನಾವು.... ನಮ್ಮಲ್ಲಿ ಬೇಧವಿಲ್ಲ....' ಎಂಬ ಮಾತನ್ನು ಓದಿಯೇ ಇಲ್ಲ. ಅಂದರೆ ಕಾದಂಬರಿಯನ್ನೇ ಓದದವರಿಂದ ಈ ಇಡೀ ತೊಂದರೆ ಹುಟ್ಟಿದೆಯಷ್ಟೆ ''[೮] ಎಂದು ತಿಳಿಸಿದ್ದಾರೆ.

ಅದೇ ರೀತಿಯಲ್ಲಿ ಈ ವಿವಾದಿತ ಕೃತಿಗಳನ್ನು ಯಾರು ಹೆಚ್ಚಾಗಿ ರಚಿಸುತ್ತಾರೆ ಎಂಬುದಕ್ಕೆ,

''ಜೆಕೋಬಿ ಎಂಬ ಚಿಂತಕ ಬೇಕಂತಲೇ ಅಸ್ಪಷ್ಟವಾಗಿ, ಕ್ಲಿಷ್ಟವಾಗಿ ಬರೆಯುವವರ ಮನಸ್ಥಿತಿಯ ಬಗ್ಗೆ ಮಾತಾಡುತ್ತಾ 'ಈ ಬಗೆಯ ಗುಪ್ತ ಹಾಗೂ ಬರ್ಬರ (Esoteric and barbaric) ಬರವಣಿಗೆಯಲ್ಲಿ ಮುಳುಗುವವರಲ್ಲಿ ಪ್ರೊಫೆಸರ್‌ಗಳು ಅಗ್ರಗಣ್ಯರು' ಎನ್ನುತ್ತಾನೆ. ಅವನ ಪ್ರಕಾರ ಈ ಪ್ರೊಫೆಸೋರಿಯಲ್ ಬರವಣಿಗೆಗೆ ಕಾರಣ ಅವರಿಗೆಲ್ಲಾ ನಿಶ್ಚಿತವಾದ ಆದಾಯವಿರುವುದು ಹಾಗೂ ಕ್ಲಾಸ್ ರೂಮಿನಿಂದ ಹೊರಗಿನ ಜಗತ್ತಿನ ಜೊತೆಗೆ ಸಂಪರ್ಕವಿರಿಸಿಕೊಳ್ಳಬೇಕಾದ ಅಗತ್ಯವೇ ಅವರಿಗಿಲ್ಲದಿರುವುದು. ಅವರು ಬರೆಯುವುದೇನಿದ್ದರೂ ತಮ್ಮ ಅಕಾಡೆಮಿಕ್ ಉನ್ನತಿಗೇ (ಅಂದರೆ ಪ್ರಮೋಷನ್‌ಗಳಿಗೆ ಹಾಗೂ ಇನ್ನೊಂದು ಹುದ್ದೆಗೆ ಜಿಗಿಯುವುದಕ್ಕೆ) ಹೊರತು ಸಾಮಾಜಿಕ ಬದಲಾವಣೆಗಾಗಿ ಅಲ್ಲ ''[೯] ಎಂದು ಹೇಳಿರುವುದು ನಿಜಕ್ಕೂ ಸತ್ಯಾಸತ್ಯತೆಯಿಂದ ಕೂಡಿದೆ ಎಂದು ಹೇಳಬಹುದು.

ಹೀಗೆ ಸಮಷ್ಟಿ ಮನಸ್ಸಿನ ದೃಷ್ಟಿಯಲ್ಲಿ ನಮಗ್ಯಾರಿಗೂ ಸಮಾಜ ಸುಧಾರಕ ಕಲ್ಯಾಣ ಪುರುಷರಾದ ಶರಣರನ್ನು ಕೃತಿಗಳಲ್ಲಿ ಅವಹೇಳನಕಾರಿಯಾಗಿ ಪ್ರಸ್ತಾಪಿಸುವುದಾಗಲಿ, ಅಥವಾ ಚಾರಿತ್ರಿಕ ವ್ಯಕ್ತಿಗಳ ಜನನ ಮೂಲದ ಮತ್ತು ಜಾತಿ ಮೂಲವನ್ನು ಹುಡುಕುವ ಸ್ವಾತಂತ್ರ್ಯವಾಗಲಿ ನಮಗಿಲ್ಲ ಎಂದು ಹೇಳಬಹುದು. ಇಲ್ಲಿ ಬಸವಾದಿ ಶರಣರು ತಮ್ಮ ಹುಟ್ಟಿನ ಮೂಲವನ್ನು ಹಾಗೂ ಜಾತಿಯ ಮೂಲವನ್ನು ಕಂಡುಕೊಂಡು ತಮ್ಮ ಆತ್ಮಕಥೆಗಳಂತಿರುವ ವಚನಗಳಲ್ಲಿ ತಮ್ಮ ಅನುಭವಗಳ ಮೂಲಕ ಮಾನವನ ಹುಟ್ಟು

ಹಾಗು ಜಾತಿಯನ್ನು ಕುರಿತು ವ್ಯಕ್ತಪಡಿಸಿದ್ದಾರೆ. ಇವುಗಳ ಬಗ್ಗೆ ಮತ್ತೆ ಅನಾವಶ್ಯಕ ವಿಶ್ಲೇಷಣೆ ಮಾಡುವುದು ಸರಿಯಲ್ಲ. ನಮ್ಮ ಮುಂದೆಯೇ ನಡೆದ ನೈಜ ಘಟನೆಯನ್ನು ನಾವು ಹೀಗೆಯೇ ನಡೆಯಿತು ಎಂದು ವಿವರಿಸಲು ಸಾಧ್ಯವಿಲ್ಲದೆ ಇರುವಾಗ ನೂರಾರು ವರ್ಷಗಳ ಹಿಂದಿನದನ್ನು ಇದು ಹೀಗೆಯೇ ನಡೆದಿದೆ ಎಂದು ಹೇಳಲು ಹೇಗೆ ಸಾಧ್ಯ ? ಹಾಗೆ ಹೇಳಿದರೂ ಅದರಿಂದ ಯಾರಿಗೇನು ಪ್ರಯೋಜನ ? ನಮ್ಮ ಮುಂದೆ ನಡೆದ ನೈಜ ಘಟನೆಯನ್ನೇ ವಿವರಿಸಲು ನಮಗೆ ಅಸಾಧ್ಯವಾಗಿರುವಾಗ ನೂರಾರು ವರ್ಷಗಳ ಹಿಂದಿನದನ್ನು ವಿವರಿಸುವುದು ನೈಜವಾಗಿ ಅರ್ಥಹೀನವಾದ ಕೆಲಸ ! ಆದ್ದರಿಂದ ಬಸವಣ್ಣನ ಹಾಗೂ ಆತನ ಸಮಾಜದವರು ಬದುಕಿದ ಜೀವನ ವಿಧಾನ ಇಲ್ಲಿ ಮುಖ್ಯವಾಗುತ್ತದೆ. ಪ್ರಸ್ತುತ ಸಮಾಜಕ್ಕೆ ಆತನ ಜಾತಿ, ಧರ್ಮ, ತಂದೆ-ತಾಯಿ, ಕುಲ-ಗೋತ್ರ, ಮತ-ಬೇಧ ಮುಖ್ಯವಾಗಿ ಬೇಕಾಗಿಲ್ಲ. ಇದನ್ನು ತಿಳಿದುಕೊಳ್ಳುವುದರಿಂದ ಯಾರಿಗೂ ಪ್ರಯೋಜನವಾಗುವುದಿಲ್ಲ. ಇವು ಸಮಾಜವನ್ನು ಒಡೆಯುತ್ತವೆಯೇ ವಿನಃ ಕಟ್ಟುವುದಿಲ್ಲ. ಆದ್ದರಿಂದ ಮಾನವರಾದ ನಾವು ಇಂತಹ ವಿಚಾರಗಳ ಬಗ್ಗೆ ಕಟ್ಟುಕತೆಗಳನ್ನು ರಚಿಸಬಾರದು.

೧೨ನೇ ಶತಮಾನದಲ್ಲಿಯೇ ಸಮಾಜವನ್ನು ಪುನರ್ ರಚಿಸುವ ಕೆಲಸಕ್ಕೆ ಕೈಹಾಕಿದ ಅಂತಹ ಮಹಾನುಭಾವ ವ್ಯಕ್ತಿಗೆ ನಾವು ಇಂದು ವಂದಿಸಬೇಕಾಗಿದೆ. ನಾವು ದಿನ ಮಾಡುತ್ತಿರುವ ಕೆಲಸ ನಮ್ಮ ಸುತ್ತಲಿನ ಸತ್ಯದ ಪರಿಸರವನ್ನು ಸುಧಾರಿಸುವ ಪ್ರಯತ್ನವೋ? ಅಥವಾ ನೂರಾರು ವರ್ಷಗಳ ಹಿಂದಿನ ಇತಿಹಾಸವನ್ನು ಅರ್ಥೈಸುವ ವ್ಯರ್ಥ ಸಾಹಸವೋ ? ಎಂದು ಯೋಚಿಸಬೇಕಾಗಿದೆ. ಶರಣರ ಬಗೆಗೆ ಇಂದಿಗೂ ಸಹ ನಿರ್ದಿಷ್ಟವಾದ ಮಾಹಿತಿಗಳು ಸಿಕ್ಕಿಲ್ಲ. ಹೀಗಿರುವಾಗ 'ಶೂನ್ಯ ಸಂಪಾದನೆ 'ಗಳು ಸಹ ಅವರ ಬಗೆಗೆ ಅನುಮಾನಾಸ್ಪದವಾದ ವಿಷಯಗಳನ್ನೇ ತಿಳಿಸುತ್ತವೆ. ಶೂನ್ಯ ಸಂಪಾದನೆಯು ಸಹ ಯಾರಿಂದ ? ರಚನೆಯಾಯಿತು ಅವುಗಳೆಷ್ಟು ? ಎನ್ನುವ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ. ಡಾ|| ಎಲ್. ಬಸವರಾಜು ಅವರು ಶೂನ್ಯ ಸಂಪಾದನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ ಮಹತ್ವದ ವಿಚಾರಗಳನ್ನು ತಿಳಿಸಿದ್ದಾರೆ. ಆದರೂ ಸಹ ಅವು ಸಂಖ್ಯೆಯಲ್ಲಿ ನಾಲ್ಕೋ ಅಥವಾ ಐದೋ ಎಂಬುದು ವಿವಾದಾಸ್ಪದವಾಗಿ ಇನ್ನೂ ಉಳಿದಿದೆ. ಇಂತಹ ಪ್ರಸ್ತುತ ಸಂದಿಗ್ಧ ಕಾಲಘಟ್ಟಗಳಲ್ಲಿ ಇವುಗಳ ಬಗ್ಗೆ ಅಧ್ಯಯನ ನಡೆಯಬೇಕಿದೆ. ಹಾಗೆಯೇ ಜಾನಪದೀಯ ನಂಬಿಕೆ, ಆಚರಣೆಗಳ ನೆಲೆಯಲ್ಲಿ ಕೃತಿಗಳನ್ನು ರಚಿಸುವ ಯೋಚನೆಗಳನ್ನು ಬಿಟ್ಟು ಮುಂದಾದರೂ ಸಮಕಾಲೀನ ಪರಿಸ್ಥಿತಿಗೆ ಅನುಗುಣವಾಗಿ ವೈಚಾರಿಕ, ವೈಜ್ಞಾನಿಕತೆಯ ನೆಲೆಯಲ್ಲಿ ಐತಿಹಾಸಿಕ ಘಟನೆ ಅಥವಾ ವ್ಯಕ್ತಿಗಳನ್ನು

ವಿಶ್ಲೇಷಣೆಗೆ ಒಳಪಡಿಸಿ ಅಧ್ಯಯನ, ಸಂಶೋಧನೆ ನಡೆಸಬೇಕಿದೆ. ಹಾಗೆಯೇ ಶರಣರ ಆದರ್ಶ ಗುಣಗಳು ಮತ್ತು ಅವರ ಸಾಹಿತ್ಯದ ಕೃಷಿ ಆ ಕಾಲಕ್ಕೇ ಮಾತ್ರ ಸೀಮಿತವಾಗದೆ ಅದು ಇಂದಿಗೂ ಸಹ ಪಸರಿಸಿಕೊಂಡು ಬಂದಿರುವ ಈ ಸಂದರ್ಭದಲ್ಲಿ ಅವರು ಇಲ್ಲಿಗೆ ನೆಲೆನಿಲ್ಲುವವರಲ್ಲ, ಮತ್ತು ಅವರ ಸಾಹಿತ್ಯ ಇಲ್ಲಿಗೇ ಮುಗಿಯುವಂತದ್ದೂ ಅಲ್ಲ. ಆದ್ದರಿಂದ ಅವರ ಸಾಹಿತ್ಯದಲ್ಲಿನ ಉತ್ತಮ ಗುಣಗಳನ್ನು ಅಳವಡಿಸಿಕೊಳ್ಳುವ ಪ್ರಯತ್ನ ನಾವು ಇಂದು ಮಾಡಬೇಕಿದೆ. ಇಂದಿಗೂ ಪ್ರಸ್ತುತರಾಗಿರುವ ಶರಣರನ್ನು ಮತ್ತು ಅವರ ಧರ್ಮದ ತತ್ವಗಳನ್ನು ಗೌರವಿಸಿ, ಉಳಿಸಿಕೊಂಡು ಹೋಗುವ ಜವಾಬ್ದಾರಿಯುತವಾದ ಕೆಲಸವನ್ನು ಮಾಡಬೇಕು.

ಹೀಗೆ ಇವರ ಧರ್ಮದ ತತ್ವಗಳನ್ನು , ನಿಯಮಗಳನ್ನು ಉಳಿಸಿ ಬೆಳೆಸಿಕೊಂಡು ಹೋಗಬೇಕಾದ ಈ ಸಂದರ್ಭದಲ್ಲಿ ಧರ್ಮಗುರುಗಳೇ ವಚನಕಾರರ ವಚನಗಳ ಅಂಕಿತವನ್ನು ತಿರುಚಿ ಇತಿಹಾಸವನ್ನೇ ಬದಲಾಯಿಸಲು ಹೊರಟಿದ್ದಾರೆ. ಅವರಲ್ಲಿ ಮಾತೆ ಮಹಾದೇವಿ ಅವರು ಪ್ರಮುಖರು ಎಂದು ಗುರುತಿಸಬಹುದು. ಇವರು ಕೆಲವು ದಶಕಗಳ ಹಿಂದೆ ಬಸವಣ್ಣನವರ ಅಂಕಿತವನ್ನು ತಿದ್ದಿ ಪ್ರಚಾರ ಪಡೆದುಕೊಂಡಂತೆ ಮತ್ತೆ ಅಕ್ಕಮಹಾದೇವಿಯ ವಚನಗಳ ಅಂಕಿತವನ್ನು ತಿರುಚಿ ಪ್ರಚಾರಕ್ಕೆ ಬಂದಿದ್ದಾರೆ. ಇವರ ಒಂದು ವಚನವನ್ನು ಈ ಕೆಳಕಂಡಂತೆ ಉದಾಹರಣೆಯಾಗಿ ನೋಡಬಹುದು.

“ ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ
ಎಡೆ ಇಲ್ಲದ ಕಡೆ ಇಲ್ಲದ ಕುರುಹಿಲ್ಲದ ಚೆಲುವಂಗೆ
ನಾನೊಲಿದೆ ಅವ್ವಾ ! ಭವವಿಲ್ಲದ ಭಯವಿಲ್ಲದ
ನಿರ್ಭಯ ಚಲುವಂಗೊಲಿದೆ ನಾನು
ಕುಲ ಸೀಮೆ ಇಲ್ಲದ ನಿಸ್ಸೀಮ ಚೆಲುವಂಗೆ
ನಾನೊಲಿದೆ ಇದು ಕಾರಣ ಚನ್ನಮಲ್ಲಿಕಾರ್ಜುನ
ಎನಗೆ ಚೆಲುವಗಂಡ ಈ ಸಾವ ಕೊಡುವ
ಗಂಡರನೊಯ್ದು ಒಲೆಯೊಳಗಿಕ್ಕು !”

ಇದು ಅಕ್ಕಮಹಾದೇವಿ ವಚನದ ಸಾಲು.... ಇದನ್ನು ಮಾತೆ ಮಹಾದೇವಿಯವರು ಬದಲಿಸಿರುವ ವಚನ ಈ ಕೆಳಕಂಡಂತೆ ಇದೆ.

“ ......................................... ಚೆಲುವಂಗೆ
ನಾನೊಲಿದೆ ಇದು ಕಾರಣ ಚೆನ್ನಮಲ್ಲಿಕಾರ್ಜುನ
ಮಹಾದೇವಿ ಅಕ್ಕಪ್ರಿಯ ಲಿಂಗದೇವ ನನಗೆ ಚೆಲುವ
ಗಂಡ.... ”[೧೮]

ಹೀಗೆ ಮಾತೆ ಮಹಾದೇವಿ ಅವರು ಅಕ್ಕಮಹಾದೇವಿಯ ವಚನಗಳನ್ನು ತಿರುಚಿ ನಾನು ಸೈದ್ಧಾಂತಿಕ ದೃಷ್ಟಿಯಿಂದ ಮಾಡಿರುವ ಅಧ್ಯಯನ ಎಂದು ಘೋಷಿಸಿಕೊಂಡು ಸಮರ್ಥನೆ ನೀಡಿರುವುದು ಸರಿಯಲ್ಲ. ಹಾಗೆಯೇ ಇದನ್ನು ಕೋರ್ಟು, ಕಛೇರಿಗೆ ಕೊಂಡೊಯ್ದು ಮುಟ್ಟುಗೋಲಿಗೆ ಒತ್ತಾಯಿಸುವುದರಿಂದಲೂ ಯಾವುದೇ ಪ್ರಯೋಜನವಿಲ್ಲ. ಇವುಗಳನ್ನು ಓದುಗರೇ ನಿರ್ಲಕ್ಷಿಸಬೇಕು. ಮತ್ತು ಇನ್ನು ಮುಂದೆಯಾದರೂ ಇಂತಹ ವಿಚಾರಗಳನ್ನು ಕೃತಿಗಳಲ್ಲಿ ಪ್ರಕಟಣೆಯಾಗದಂತೆ ಸಮಾಜ ಚಿಂತಕರಾದ ಬರಹಗಾರರು ಮತ್ತು ಲೇಖಕರೇ ಮುನಗಂಡು ಎಚ್ಚರ ವಹಿಸಬೇಕು. ಹಾಗೆಯೇ ಇದುವರೆಗೂ ಮುಟ್ಟುಗೋಲಾದ ಸಾಹಿತ್ಯ ಕೃತಿಗಳನ್ನು ಮರು ವ್ಯಾಖ್ಯಾನಕ್ಕೆ ಬುದ್ಧಿಜೀವಿಗಳು ಒಳಪಡಿಸಿಕೊಂಡು ಇವುಗಳ ಮೇಲೆ ಬಂದಿರುವ ಆಪಾದನೆಗಳನ್ನು ಪರಿಶೀಲಿಸಬೇಕಾಗಿದೆ.

---

## ಅಡಿ ಟಿಪ್ಪಣಿಗಳು :

೧. ಶ್ರೀಮತಿ ಸೌ.ಮೀನಾರಾವ್ - ಪಿ.ವಿ.ನಾರಾಯಣ ಕಾದಂಬರಿ 'ಧರ್ಮಕಾರಣ ' ; ಒಂದು ಅನಿಸಿಕೆ. ಸತ್ಯಶುದ್ಧ ಕಾಯಕ ತ್ರೈಮಾಸಿಕ ಸಂಪುಟ -೬, ಸಂಚಿಕೆ ೩-೪, ಮಾರ್ಚ್ -ಆಗಸ್ಟ್ ೧೯೯೬ ಪುಟ-೭೭-೭೮.

೨. ನಟರಾಜ್ ಹುಳಿಯಾರ್ 'ಗಾಳಿಬೆಳಕು ' ಸಾಂಸ್ಕೃತಿಕ ಬರಹಗಳು, ಚಂದನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು, ಮೊದಲ ಮುದ್ರಣ ೨೦೦೨, ಲೇ. ಕಟಕಟೆಯಲ್ಲಿ ಪುಸ್ತಕಗಳು, ಪುಟ ೨೩.

೩. ಶ್ರೀಮತಿ ಸೌ. ಮೀನಾರಾವ್ ; ಪಿ.ವಿ.ನಾರಾಯಣ ಕಾದಂಬರಿ 'ಧರ್ಮಕಾರಣ ' : ಒಂದು ಅನಿಸಿಕೆ ಸತ್ಯಶುದ್ಧ ಕಾಯಕ ತ್ರೈಮಾಸಿಕ, ಸಂಪುಟ ೬, ಸಂಚಿಕೆ ೩-೪, ಮಾರ್ಚ್ -ಆಗಸ್ಟ್ ೧೯೯೬, ಪುಟ ೭೪.೭

೪. ನಟರಾಜ್ ಹುಳಿಯಾರ್ 'ಗಾಳಿಬೆಳಕು ' : 'ಧರ್ಮಕಾರಣದ ಸುತ್ತ ಕ್ಷುದ್ರ ರಾಜಕಾರಣ ' ಪುಟ : ೬೮, ಮೊದಲ ಮುದ್ರಣ ೨೦೦೨ : ಚಂದನ ಪ್ರಿಂಟರ್ಸ್ , ಶ್ರೀನಗರ, ಬೆಂಗಳೂರು.

★ ರೇವಯ್ಯ ಒಡೆಯರ್, ಪಿ.ವಿ.ನಾರಾಯಣರ 'ಧರ್ಮಕಾರಣ', 'ಸಂಕ್ರಮಣ ' ೨೯೯/ಜುಲೈ ೧೯೯೭, ಪುಟ -೫೫-೫೬

೫. ಅನ್ನದಾನಯ್ಯ ಪುರಾಣಿಕ :ಷಟ್‌ಸ್ಥಲ ಬ್ರಹ್ಮಿ ಚನ್ನಬಸವಣ್ಣ , ಬಸವಸಮಿತಿ ಬೆಂಗಳೂರು ದ್ವಿತೀಯ ಆವೃತ್ತಿ ೧೯೯೯. 'ಲೇಖಕನ ನುಡಿ '.

೬. ಬಿ.ಎನ್.ಮಂಜುಳಾ : ಧರ್ಮಕಾರಣದ ಹಿಂದಿರುವ ರಾಜಕಾರಣ , ಸಂಕ್ರಮಣ, ಸಂಪುಟ : ೩೨, ಸಂಚಿಕೆ-೭, ಜುಲೈ ೧೯೯೭ ಪುಟ : ೮.

೭. ಅನ್ನದಾನಯ್ಯ ಪುರಾಣಿಕ :ಷಟ್‌ಸ್ಥಲ ಬ್ರಹ್ಮಿ ಚನ್ನಬಸವಣ್ಣ , ಬಸವಸಮಿತಿ ಬೆಂಗಳೂರು ದ್ವಿತೀಯ ಆವೃತ್ತಿ ೧೯೯೯. ಪುಟ ೪,೫ ಮತ್ತು ೬.

೮. ನಟರಾಜ್ ಹುಳಿಯಾರ್ 'ಗಾಳಿಬೆಳಕು ' : 'ಧರ್ಮಕಾರಣದ ಸುತ್ತ ಕ್ಷುದ್ರ ರಾಜಕಾರಣ ' ಪುಟ : ೬೬, ಮೊದಲ ಮುದ್ರಣ ೨೦೦೨ : ಚಂದನ ಪ್ರಿಂಟರ್ಸ್ , ಶ್ರೀನಗರ, ಬೆಂಗಳೂರು.

೯. ಅದೇ ಪುಸ್ತಕ , ಲೇಖನ - 'ಸ್ಪಷ್ಟತೆ ' ಮತ್ತು 'ಕ್ಲಿಷ್ಟತೆ'ಗಳ ನಡುವೆ, ಪುಟ : ೬೨.

೧೦. ಈ ಭಾನುವಾರ ವಾರಪತ್ರಿಕೆ , ಆಗಸ್ಟ್ ೧೦, ಸಂಪುಟ -೪, ಸಂಚಿಕೆ ೩೦, ಪುಟ ೫, ೨೦೦೮

# ಅಧ್ಯಾಯ-5

## ಅನುದೇವಾ ಹೊರಗಣವನು.....

(ಬಸವಣ್ಣನ ಜಾತಿ ಮೂಲದ ವಿಶ್ಲೇಷಣೆ)

### ಪರಿವಿಡಿ

**೫. ಪೀಠಿಕೆ :** ಡಾ. ಬಂಜಗೆರೆ ಜಯಪ್ರಕಾಶ್ ಅವರು 'ಆನುದೇವಾ ಹೊರಗಣವನು ' ಕೃತಿಯಲ್ಲಿ ಬಸವಣ್ಣನ ಜಾತಿ ಮೂಲದ ವಿಶ್ಲೇಷಣೆಯನ್ನು ಕುರಿತು ಪ್ರಬಂಧವನ್ನು ಮಂಡಿಸಿದ್ದಾರೆ. ಇತ್ತೀಚೆಗೆ ಈ ಪ್ರಬಂಧದ ಬಗೆಗೆ ನಡೆದ ವಾದ, ವಿವಾದ, ಚರ್ಚೆ, ಸಮರ್ಥನೆ, ಧೂಷನೆ, ಸ್ಪಷ್ಟೀಕರಣ ಮುಂತಾದವುಗಳೆಲ್ಲಾ ವೈಚಾರಿಕ ನೆಲೆಯಲ್ಲಿ ನಡೆದಂತೆಯೇ, ಅದನ್ನು ಭಾವನಾತ್ಮಕ ವಿಷಯವನ್ನಾಗಿಸಿ, ಬೀದಿಗೆಳೆಯುವಲ್ಲಿ ಹಲವರು ಮುಂದಾಗಿದ್ದನ್ನು ನೋಡಬಹುದು.

ಬಸವಣ್ಣನವರು ಹುಟ್ಟಿನಿಂದ ಬ್ರಾಹ್ಮಣರಲ್ಲ, ಮಾದಿಗ ಜನಾಂಗದ ಮೂಲದವರು ಎಂಬುದು ಲೇಖಕರ ವಾದ. ಇದೇ ರೀತಿಯ ವಿಚಾರಗಳನ್ನು ಇವರಿಗಿಂತ ಮುಂಚೆಯೇ ಅನೇಕ ವಿದ್ವಾಂಸರು ತಮ್ಮ ಸಂಶೋಧನಾತ್ಮಕ ಕೃತಿಗಳಲ್ಲಿ ತಮ್ಮ ವಾದಗಳನ್ನು ಮಂಡಿಸಿದ್ದಾರೆ ಎಂಬುದನ್ನು ತಿಳಿಯಬಹುದು. ಬಸವಣ್ಣನವರು ಮೂಲತಃ ಪಾಂಚಾಳರು ಅಥವಾ ವಿಶ್ವಕರ್ಮರು ಇರಬೇಕೆಂದು ಕೆಲವರು ಕರೆದಂತೆ, ಇನ್ನೂ ಕೆಲವರು ಅಲ್ಲ ಕುರುಬರು ಎಂದು ಕರೆದಿದ್ದಾರೆ. ಇಂತಹ ವಿಚಾರಗಳು ಅಶುದ್ಧವೆಂದು ಭಾವಿಸಿ ಅಲ್ಲಿಗೆ ಹಾಗೇ ತಣ್ಣಗಾದದ್ದು ಹಲವರಿಗೆ ಜ್ಞಾಪಕವಿರುವ ವಿಷಯವಾಗಿದೆ. ಹೀಗೆ ಇವರ ಈ ಪ್ರಬಂಧವು ಸಹ ಇವುಗಳ ಸಾಲಿಗೆ ಸೇರುವ ಒಂದು ಕೃತಿಯೆಂದು ಹೇಳಬಹುದು. ಅನೇಕ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಇಂತಹ ವಿಚಾರಗಳನ್ನು ಪದೇ ಪದೇ ಪ್ರಸ್ತಾಪಿಸಿದ್ದಾರೆ. ಅದೇ ರೀತಿ ಬಸವಣ್ಣನ ವಚನಗಳನ್ನೇ ಉದಾಹರಿಸಿ ಅವನು ''ನೀಚಕುಲದಲ್ಲಿ ಅನೀತಿಯುಕ್ತ ಸಂಬಂಧದಿಂದ ಹುಟ್ಟಿದವನು'' ಎಂದು 'ಮಹಾಚೈತ್ರ' ನಾಟಕದ ಒಂದು ಕಡೆ ಹೇಳಿಕೆ ಇರುವುದನ್ನು ನೋಡಬಹುದು. ಅಷ್ಟೇ ಅಲ್ಲದೆ ಬಸವಣ್ಣನನ್ನು ಪಾಪಾತ್ಮ ಶಿರೋಮಣಿ, ಬೋಗಾಪೇಕ್ಷಿ, ಮಹಾಧರ್ಮದ್ರೋಹಿ, ಸ್ವಾಮಿದ್ರೋಹಿ, ದುಷ್ಟಮಂತ್ರಿ, ಕುಲಘಾತುಕ, ಧರ್ಮಬಾಹಿರನು, ಕುಲಗೆಟ್ಟವನು... ಮುಂತಾಗಿ ಉಲ್ಲೇಖಿಸುವ ಬರಹಗಳುಳ್ಳ ಕೃತಿಗಳನ್ನು ಹಾಗೂ ಬಸವಾಧ್ವಾಂತ ದಿವಾಕರ' ಮುಂತಾದ ಪ್ರಕಟಣೆಗಳನ್ನು ಪ್ರಚುರಗೊಳಿಸುವ ವ್ಯವಸ್ಥಿತ ಕಾರ್ಯಕ್ರಮುವನ್ನೇ ಕೈಗೊಂಡಿದ್ದ ಆಚಾರ್ಯ ಪೀಠದವರೂ ಆದ ಇಂದಿನ ಜಗದ್ಗುರುಗಳು ಇಂದು ಬಸವ ಪ್ರೇಮಿಗಳಾಗಿ ಬಿಟ್ಟಿದ್ದಾರೆ ಎಂದು ಲೇಖಕರೊಬ್ಬರು ('ಸಂಕ್ರಮಣ' ಜುಲೈ -ಆಗಸ್ಟ್ ೨೦೦೭ ) ವಿಮರ್ಶಾ ಲೇಖನ ಕೃತಿಯಲ್ಲಿ ಹೇಳಿದ್ದಾರೆ.

ಬಸವಣ್ಣನವರ ವಚನಗಳ ಅಂಕಿತನಾಮುವನ್ನು ತಿದ್ದಿ 'ವಚನ ದೀಪ್ತಿ' ಕೃತಿಯ ಮೂಲಕ ಬೆಳಕಿಗೆ ಬಂದ ಮಾತೆ ಮಹಾದೇವಿಯರು ಇಂದೂ ಸಹ ಅಕ್ಕ ಮಹಾದೇವಿಯ ವಚನದ ಅಂಕಿತನಾಮು 'ಚನ್ನಮಲ್ಲಿಕಾರ್ಜುನ 'ನ ಬದಲಿಗೆ 'ಮಹಾದೇವಿ ಅಕ್ಕಪ್ರಿಯ

ಲಿಂಗದೇವ ' ಎಂದು ಬದಲಿಸಿ ಮತ್ತೊಮ್ಮೆ ವಿವಾದವನ್ನು ಸೃಷ್ಟಿಸಿ ಬಸವ ಧರ್ಮದ ಮತ್ತು ಶರಣ ಧರ್ಮದ ಇತಿಹಾಸವನ್ನು ತಿರುಚಿದ್ದಾರೆ ಎಂದು ಹೇಳಬಹುದು. ''ಸ್ವಂತದ ಹಿತಾಸಕ್ತಿಗಳನ್ನು ಸಂರಕ್ಷಿಸಿಕೊಳ್ಳುವುದಕ್ಕಾಗಿ ರಾಜಕೀಯ ಶಕ್ತಿಗಳೊಡನೆ ಸಂಧಾನ ಬೆಳೆಸುವುದಕ್ಕೂ ಸಿದ್ಧವಿರುವ ಮಾತೆಯರು ಇಂದು ಬಸವ ಧರ್ಮವನ್ನು ಬ್ರಾಹ್ಮಣೀಕರಣ ಗೊಳಿಸುತ್ತಿರುವುದು ವಿಷಾದನೀಯವಾಗಿದೆ. 'ಮೇಲಾಗಲೊಲ್ಲೆನು ಕೀಳಾಗಲಲ್ಲದೆ' ಎಂದ ಬಸವಣ್ಣ ತನ್ನನ್ನು ಕೀಳರಿಗಿಂತಲೂ ಕೀಳಾಗಿ ಸಮುದಾಯಗಳೊಡನೆ ಸಮೀಕರಿಸಿಕೊಳ್ಳುತ್ತಿರುವಾಗ ಬಸವಣ್ಣ ಕೆಳ ಜಾತಿಯಲ್ಲಿ ಹುಟ್ಟಿರಬಹುದೇ ಎಂದು ಅನುಮಾನಿತ ಸತ್ಯವನ್ನು ಅನ್ವೇಷಿಸುತ್ತಿರುವ ಪ್ರಯತ್ನದ ಬಗೆಗೆ ಇಷ್ಟೊಂದು ತಲೆಕೆಡಿಸಿಕೊಂಡ ಲಿಂಗಾಯತ ಸಮಾಜ ಬಾಂಧವರು ಇದಕ್ಕೂ ತೀರ ಹೆಚ್ಚಿನ ಅನಿಷ್ಟಕಾರಿಯಾದ ಬಸವಣ್ಣನ ಧರ್ಮದ ವೈದಿಕೀಕರಣದ ಸೂಕ್ಷ್ಮ ರೀತಿಯ ಪ್ರಯತ್ನಗಳನ್ನು ನಿರ್ಲಕ್ಷಿಸುತ್ತಿರುವುದು ಹೆಚ್ಚು ದುಃಖಕರವಾದ ಸಂಗತಿ '' ಎಂದು ಲೇಖಕರೊಬ್ಬರು ಸಂಕ್ರಮಣ ಪತ್ರಿಕೆಯಲ್ಲಿ ಹೇಳಿದ್ದಾರೆ.

ಒಂದು ಸಂಸ್ಕೃತಿಯ ಸಾಮಾಜಿಕ, ಧಾರ್ಮಿಕ, ರಾಜಕೀಯ, ಹಾಗೂ ಆರ್ಥಿಕ ವಿಚಾರಗಳ ವಿಶಿಷ್ಟತೆಯ ಬಗ್ಗೆ ಅನುಮಾನ, ಸಂಶಯಗಳು ಮಾನವನಲ್ಲಿ ಯಾವಾಗ ಚಿಂತನೆಗೆ ಶುರುವಾಗುತ್ತದೆ ಎಂಬುದನ್ನು ವಿಶ್ಲೇಷಿಸುವುದು ತೀರ ಜಟಿಲವಾದ ಕೆಲಸ. ಸರ್ವಮಾನ್ಯವಾದ ತಾತ್ವಿಕ ವಿಚಾರಗಳ ಉತ್ತರಗಳು ಇದಕ್ಕೆ ಬಹುಶಃ ಅಸಾಧ್ಯವಾದರೂ, ಕೆಲವೊಂದು ನಿರ್ದಿಷ್ಟ ಸಂದರ್ಭಗಳಲ್ಲಿ ಮಾತ್ರ ಗುರುತಿಸಿಕೊಳ್ಳಬಹುದು. ಸಂಸ್ಕೃತಿಯೊಂದು ಸಮಾಜದೊಂದಿಗೆ ತನ್ನ ಸ್ವಪ್ರತಿಮೆಯ ಬಗ್ಗೆ ಆಳವಾದ ಸಂದಿಗ್ಧ ಸ್ಥಿತಿಯಲ್ಲಿದ್ದಾಗ ತನ್ನ ಸ್ವತಂತ್ರ ಅಸ್ತಿತ್ವದ ಬಗ್ಗೆ ತನ್ನನ್ನೇ ನಂಬಿಸಿಕೊಳ್ಳಬೇಕಾದ ಪರಿಸ್ಥಿತಿ ಬಂದಾಗ, 'ಅನ್ಯ' ಸಂಸ್ಕೃತಿಯ ಶಕ್ತಿ ತನ್ನನ್ನು ಸಂಪೂರ್ಣವಾಗಿ ಕರಗಿಸಿ ಹಾಕುವ ಸ್ಥಿತಿಯಲ್ಲಿ ಈ ರೀತಿಯ ವಿಶಿಷ್ಟ ರೂಪ ರೇಖೆಗಳ ಅನ್ವೇಷಣೆ ಪ್ರಾರಂಭವಾಗುತ್ತದೆ ಎನ್ನಬಹುದು. ವಸಾಹತುಶಾಹಿ ಸನ್ನಿವೇಶದಲ್ಲೂ ಇದು ನಡೆಯಬಹುದು. ಅಥವಾ ಒಂದು ಜಾತಿ, ಧರ್ಮ ತೀವ್ರವಾಗಿ ಬೆಳೆದು ಉಳಿದೆಲ್ಲ ವಿಶಿಷ್ಟತೆಗಳನ್ನು ಆಕ್ರಮಿಸುತ್ತಿರುವ ಸನ್ನಿವೇಶಗಳಲ್ಲೂ ಆಗಬಹುದು. ಇಂದಿನ ಏಕರೂಪೀ ಜೀವನ ಕ್ರಮವನ್ನು ತಂದು ಹೇರುತ್ತಿರುವ ಪ್ರಕ್ರಿಯೆಯ ವಿರುದ್ಧ ದೇಸಿ ಸಂಸ್ಕೃತಿಗಳು ಬೌದ್ಧಿಕವಾಗಿ ಚಿಂತಿಸುತ್ತಿರುವ, ಪ್ರತಿಭಟಿಸುತ್ತಿರುವ ಫಲವೇ ಈ ಸಂದರ್ಭದ ಸಾಂಸ್ಕೃತಿಕ ನಿರ್ದಿಷ್ಟತೆಯ ಹುಡುಕಾಟಗಳು ಆಗಿವೆ. ಈ ರೀತಿಯ ಸಾಂಸ್ಕೃತಿಕ ನಿರ್ದಿಷ್ಟತೆಯ ಅನ್ವೇಷಣೆ ನಮ್ಮಲ್ಲಿ ನಮಗೇ ಅರಿವಿಲ್ಲದೆ ನಡೆಯುತ್ತಿರುತ್ತದೆ. ಒಂದು ಸಂಸ್ಕೃತಿ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಶಕ್ತಿ ಮತ್ತು ಅನ್ಯ ದೇಶೀಯ

ಸಂಸ್ಕೃತಿ, ಸಮಾಜಗಳ ಮೇಲೆ ಹಿಡಿತ, ಪ್ರಭುತ್ವ ಸಾಧಿಸುವಾಗ ಇಂಥ ಪರಿಕಲ್ಪನೆಗಳು ಹುಟ್ಟುತ್ತವೆ. ಇಲ್ಲೂ ಕೂಡಾ ಅಂತಿಮವಾಗಿ ರಾಜಕೀಯದ ರಾಜಕಾರಣದ ಸ್ವರೂಪ ಕಾಣಿಸುತ್ತದೆ. ತನ್ನತನವನ್ನು ಅನ್ಯರಿಂದ ಬಿಡಿಸಿ ಬೇರ್ಪಡಿಸಿ ತೋರಿಸುವಾಗ ಆಕ್ರಮಣಶೀಲತೆ ಅನಿವಾರ್ಯವಾಗಿ ಬಿಡುವ ಸ್ಥಿತಿ ಇದು. ಇದೇ ಸತ್ಯವಿರಬಹುದು ಎಂಬ ನಂಬಿಕೆಯಿಂದ ಹೊರಟ ಅಧ್ಯಯನಗಳೂ ಸಹ ಒಂದೊಂದು ಸಂದರ್ಭದಲ್ಲಿ ಕರಗುವ ಸಂಭವವೂ ಇರುತ್ತದೆ. ಆದರೆ ಈ ನೆಲೆಗಟ್ಟಿನಲ್ಲಿ ಅನೇಕ ಒಳ ಸೂಕ್ಷ್ಮಗಳಿರುತ್ತವೆ ಎಂಬುದನ್ನು ಮರೆಯುವಂತಿಲ್ಲ. ಹಾಗೆಯೇ ಅನೇಕ ಸಾರಿ ತಪ್ಪುಗಳನ್ನು ಸಹ ಸತ್ಯವೆನ್ನುವಂತೇ ನಿರೂಪಿಸಲಾಗಿರುತ್ತದೆ. ಅನೇಕ ಸಾರಿ ಈ ಅನ್ಯ ಸಂಸ್ಕೃತಿಯ ಬಗ್ಗೆ ಬರೆಯುವಾಗ ಗೌರವ, ಶ್ರದ್ಧೆ ಪ್ರೀತಿಗಳು ವಿದ್ವಾಂಸರಿಗೆ ಬೆಳೆಯುವುದಷ್ಟೇ ಅಲ್ಲದೆ ಅವುಗಳ ಬಗ್ಗೆ ದ್ವೇಷ, ಅಸೂಯೆ, ತಿರಸ್ಕಾರ ಮನೋಭಾವವೂ ಸಹ ಬೆಳೆಯುವುದುಂಟು. ಆದರೆ ಇವು ಬಹಳ ಸಾರಿ ಆದರ್ಶೀಕೃತ ಗತಕಾಲದ ನಾಗರೀಕತೆಯೊಂದಕ್ಕೆ ಸೀಮಿತವಾಗಿಬಿಡುತ್ತವೆ. ಹೀಗಾಗಿ ವರ್ತಮಾನದ ಬಗ್ಗೆ ಆಳವಾದ ಮೋಹ, ಅಸಹ್ಯ, ತಿರಸ್ಕಾರ ಅಥವಾ ಗತಕಾಲದ ಬಗ್ಗೆ ಆಳವಾದ ಪ್ರೀತಿ, ಸಂಶಯಗಳು ಪ್ರತಿಯೊಬ್ಬರಲ್ಲೂ ಹುಟ್ಟುತ್ತಿರುತ್ತದೆ. ಇದರಿಂದ ಸಮಕಾಲೀನ ಸಾಮಾಜಿಕ ಜನತೆ ಧಾರ್ಮಿಕ ಆಚರಣೆಗಳಲ್ಲಿ ಮುಳುಗಿರುವಾಗ ಐತಿಹಾಸಿಕ ಪ್ರಸಿದ್ಧ ಸಿದ್ಧ ಪುರುಷರ, ಯತಿಗಳ, ಪೌರಾಣಿಕ ವ್ಯಕ್ತಿಗಳ, ಶಿವಶರಣರ ಬಗ್ಗೆ ಪೂಜ್ಯ ಭಾವನೆಯನ್ನು ತಳೆದಿರಬೇಕಾಗುತ್ತದೆ. ಇವರ ಬಗೆಗೆ ಯಾವುದೇ ರೀತಿಯ ವೈಜ್ಞಾನಿಕ, ವೈಚಾರಿಕ ನೆಲೆಯಲ್ಲಿ ಸಂಶೋಧನೆಯನ್ನು ಹಾಗೂ ಆಲೋಚನೆಯನ್ನು ಸಹ ಮಾಡಿರುವುದಿಲ್ಲ. ಇಂತಹ ಸಂದರ್ಭದಲ್ಲಿ ಆಧುನಿಕ ಸಂಶೋಧನೆಗಳಿಂದ ಹೊಸ ಹೊಸ ವಿಚಾರಗಳು ಬೆಳಕಿಗೆ ಬಂದಾಗ ಸಮಾಜವು ಒಪ್ಪಿಕೊಳ್ಳುವ ಅಥವಾ ಬಿಡುವ ಪರಿಸ್ಥಿತಿಯಲ್ಲಿ ಅಂತಹ ವಿಚಾರಗಳನ್ನು, ಹೇಳಿಕೆಗಳನ್ನು ದೂಷಿಸುವುದಲ್ಲದೆ ವಿರೋಧಿಸುವುದೇ ಹೆಚ್ಚು. ಮೂಲದಿಂದಲೂ ನಡೆದುಬಂದಿರುವ ನಂಬಿಕೆಗಳು, ಆಚರಣೆಗಳು ನಮ್ಮ ರಕ್ತದ ಕಣಗಳಲ್ಲಿ ಬೆರೆತು ಹೋಗಿ ಬಿಟ್ಟಿರುವುದೇ ಇದಕ್ಕೆ ಮುಖ್ಯ ಕಾರಣವೆಂದು ಹೇಳಬಹುದು.

ಹೀಗೆ ಒಂದು ಕೃತಿಯನ್ನು ಒಪ್ಪಿಕೊಳ್ಳುವ ಅಥವಾ ಬಿಡುವ ಸ್ಥಿತಿಗಳಲ್ಲಿ ಸಾಂಸ್ಕೃತಿಕ ನಿರ್ದಿಷ್ಟತೆಯ ಅನ್ವೇಷಣೆ ಪ್ರಾರಂಭವಾಗುತ್ತದೆ. ಸೃಜನಶೀಲ ಸನ್ನಿವೇಶಗಳಲ್ಲಿ ಇಂತಹ ವಿಚಾರಗಳ ಚರ್ಚೆಗಳು ಇನ್ನಷ್ಟು ಸೂಕ್ಷ್ಮವಾದ ಆಯಾಮಗಳನ್ನು ಪಡೆದುಕೊಂಡು ವಿವಾದಗಳಿಗೆ ಒಳಗಾಗುತ್ತವೆ ಎಂದು ಗುರುತಿಸಿ ಕೃತಿಯ ಒಳಗಡೆ ಪ್ರವೇಶಿಕೆ ಮಾಡುತ್ತಿದ್ದೇನೆ. ಹಾಗೂ ಇಲ್ಲಿ ನನ್ನ ಅಧ್ಯಯನಕ್ಕೆ ಬೇಕಾದ ಕೃತಿಯ ಕೆಲವೊಂದು ಮುಖ್ಯ

ವಿಚಾರಗಳನ್ನು ಪ್ರಸ್ತಾಪಿಸಿ ಉಳಿದವುಗಳನ್ನೂ ಸಹ ಗಮನಿಸಿದ್ದೇನೆ. ಇದು ನನ್ನ ಒಂದು ನೋಟದ ಕ್ರಮವೇ ಹೊರತು ಇದೇ ಅಂತಿಮವಲ್ಲ, ಇದರಾಚೆಗೂ ಇಂತಹ ಅಧ್ಯಯನಗಳಿವೆ ಎಂಬುದನ್ನು ನಾನು ಭಾವಿಸಿದ್ದೇನೆ. ಬಸವಣ್ಣನ ತಂದೆ -ತಾಯಿ, ಜಾತಿ, ಕುಲ, ಕಾಲ, ಸ್ಥಳನಾಮದ ಇತಿವೃತಃವನ್ನು ಸ್ಪಷ್ಟವಾಗಿ, ನಿರ್ದಿಷ್ಟವಾಗಿ ತಿಳಿಸುವ ಮೂಲ ಆಕರ ಗ್ರಂಥಗಳು ಅಥವಾ ದಾಖಲೆ ಸಾಮಗ್ರಿಗಳೆಂದರೆ, ಶಾಸನಗಳು, ಪ್ರಾಚೀನ ಕಾಲದ ಗ್ರಂಥಗಳು ಹಾಗೂ ಸ್ವರಚಿತ ವಚನಗಳು. ಇವುಗಳನ್ನು ನಾವು ಹೀಗೆ ನೋಡಬಹುದು.

**೫.೧ ಶಾಸನಗಳ ಆಧಾರ :**

ಕೃತಿಯ ೪೧ನೇ ಪುಟದಲ್ಲಿ ''ಬಸವಣ್ಣನಿಗೆ ದೇವರಾಜನೆಂಬ ಅಣ್ಣನಿದ್ದುದಾಗಿ ಅರ್ಜುನವಾಡ ಶಾಸನದ ಬಲದಿಂದ ವಿದ್ವಾಂಸರು ತರ್ಕಿಸಿದ್ದಾರೆ. ಬಸವಣ್ಣನ ಕಾಲಾನಂತರ ದಲ್ಲಿಯೂ ದೇವರಾಜನ ಮಕ್ಕಳು (ಅವರು ಉದರಸಂಜಾತ ಅಥವಾ ಕರಸಂಜಾತ ಯಾವುದೇ ಬಗೆಯವರಾಗಿರಬಹುದು ) ಉಳಿದು ಬಂದಿದ್ದರೆಂದು 'ಅರ್ಜುನವಾಡ ' ಶಾಸನ ಸೂಚಿಸುತ್ತದೆ. ಬಸವಣ್ಣನಿಗೆ ದೇವರಾಜನೆಂಬ ಅಣ್ಣನಿದ್ದುದು ಸಧ್ಯಕ್ಕೆ 'ಐತಿಹಾಸಿಕವಾಗಿ ದೃಢಗೊಂಡಿರುವ ಸತ್ಯ' ಎಂದು ಚಿದಾನಂದಮೂರ್ತಿ ಅವರು ಅಭಿಪ್ರಾಯಪಟ್ಟಿದ್ದಾರೆ '' ಎಂದು ಲೇಖಕರು ಕೃತಿಯಲ್ಲಿ ಪ್ರಸ್ತಾಪಿಸಿದ್ದಾರೆ. ಇದನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿ ಇದರ ಒಳ ರೂಪಗಳನ್ನು ಒಂದೊಂದಾಗಿ ಬಿಡಿಸಿ ತೋರಿಸಿದವರಲ್ಲಿ ಎಂ.ಎಂ.ಕಲಬುರ್ಗಿ ಅವರೂ ಒಬ್ಬರು ಎಂದು ಗುರುತಿಸಬಹುದು. ಇವರು 'ಅರ್ಜುನವಾಡ'ಶಾಸನದ ಕಂದಪದ್ಯದಿಂದ ಹೊರಡುವ ಪಾಠವನ್ನು ತಿದ್ದುಪಡಿ ಮಾಡಿ ಈ ಕೆಳಕಂಡಂತೆ ಮಾರ್ಪಡಿಸಿಕೊಟ್ಟಿದ್ದಾರೆ. ಇದನ್ನು ಡಾ|| ಸಿ. ನಾಗಭೂಷಣ ಅವರ ಒಂದು ಲೇಖನದಲ್ಲಿ ನೋಡಬಹುದು ಮತ್ತು ಚಿದಾನಂದಮೂರ್ತಿ ಅವರು ಅಭಿಪ್ರಾಯ ಪಡುತ್ತಾರೆಯೇ ವಿನಃ ಇದೇ ಸತ್ಯವೆಂದು ಅವರು ಸಹ ತಮ್ಮ ಕೃತಿಯಲ್ಲಿ ಹೇಳಿಲ್ಲ ಎಂಬುದನ್ನು ಇವರ ಲೇಖನ ಕೃತಿಯಿಂದ ತಿಳಿಯಬಹುದು. ಹೀಗೆ ಈ ವಿಚಾರಗಳ ಬಗೆಗೆ ಇರುವ ಸತ್ಯವೆಂಬುದು ವೈಯಕ್ತಿಕವಾದದ್ದೇ ವಿನಃ ಸಮುದಾಯದತ್ತವಾದುದ್ದಲ್ಲ. ಹಾಗೆಂದು ಕೆಲವೊಮ್ಮೆ ತಿಳಿಯಬೇಕಾಗಿಯೂ ಇಲ್ಲ ಎಂಬುದನ್ನು ಹೇಳಬಹುದು.

ಶರಣರನ್ನು ಕುರಿತ ಕಾವ್ಯ, ಪುರಾಣ, ಸ್ವರಚಿತ ವಚನಗಳಲ್ಲಿನ ಸಂಗತಿಗಳಿ[redacted]ಗಿಂತ ಭಿನ್ನವಾದ ರೀತಿಯಲ್ಲಿ ಶುದ್ಧ ಇತಿಹಾಸ ಶಾಸನಗಳಲ್ಲಿಯೂ ಸಿಗುತ್ತದೆ ಎಂಬುದಕ್ಕೆ ಹಲವಾರು ಶಾಸನಗಳು ದೊರೆಯುತ್ತವೆ. ಅವುಗಳಲ್ಲಿ ಬಹುಮುಖ್ಯವಾಗಿ ಬಸವಣ್ಣನವರ ತಂದೆ -ತಾಯಿ, ಜಾತಿಯನ್ನು ಕುರಿತು ಇರುವ ಕೆಲವೊಂದು ಶಾಸನಗಳನ್ನು ಈ

ಕೆಳಕಂಡಂತೆ ಉದಾಹರಣೆಗೆ ನೋಡಬಹುದು. ಇಲ್ಲಿ ಬಂಜಗೆರೆ ಜಯಪ್ರಕಾಶ್ ಅವರು, ಶಾಸನಗಳಲ್ಲಿ ಬಸವಣ್ಣನ ತಂದೆ-ತಾಯಿ, ಜಾತಿಯ ಹೆಸರು ಇರುವ ಶಾಸನಗಳು ಇದುವರೆಗೂ ಸಿಕ್ಕಿಲ್ಲ ಎಂದು ತಿಳಿಸಿದ್ದಾರೆ. ಆದರೆ, ಅವರು ನೀಡುವ ಈ ಹೇಳಿಕೆ ಅಸ್ಪಷ್ಟವಾಗಿದೆ ಎಂಬುದಕ್ಕೆ ನಮ್ಮಲ್ಲಿರುವ ಪ್ರಮುಖ ಶಾಸನಗಳನ್ನು ಈ ಕೆಳಕಂಡಂತೆ ನೋಡಬಹುದು.

**ಅರ್ಜುನವಾಡ ಶಾಸನ (೧೨೬೦) :**

''ಮತ್ತಂ ತರ್ದ್ದವಾಡಿ ಮಧ್ಯಗ್ರಾಮ ಬಾಗವಾಡಿ ಪುರಾವರಾಧೀಶ್ವರ ಮಾದಿರಾಜನ ತನೂಜನಂ ಬಸವರಾಜನ ಮಹಿಮೆಯಂತೆಂದಡೆ ''[೧] ಎಂದು ಅರ್ಜುನವಾಡ ಶಾಸನ (೧೨೬೦) ಉಲ್ಲೇಖ ಮಾಡಿದೆ.

ಇಲ್ಲಿ ಬಸವಣ್ಣನ ಜನ್ಮಸ್ಥಳ ಬಿಜಾಪುರ ಜಿಲ್ಲೆಯ ಬಾಗೇವಾಡಿ. ಆ ಕಾಲದಲ್ಲಿ ಅದು ತರ್ದ್ದವಾಡಿಗೆ ಸೇರಿತ್ತು. ಮತ್ತು ಅದೊಂದು ಪ್ರಸಿದ್ಧ ಅಗ್ರಹಾರವಾಗಿತ್ತು ಎಂಬಿತ್ಯಾದಿ ವಿಚಾರಗಳನ್ನು ತಿಳಿಸುತ್ತದೆ. ಹಾಗೆಯೇ ಮಂಡಗೆಯ ಮಾದಿರಾಜ ಬಾಗೇವಾಡಿಯ ಅಧಿಪತಿ ಹಾಗೂ ಆತನ ಸತಿ ಮಾದಲಾಂಬೆ ಎಂಬ ವಿಚಾರಗಳನ್ನು ತಿಳಿಸುತ್ತದೆ. ಈ ಶಾಸನದೊಂದು ಕಂದ ಪದ್ಯದಿಂದ ಇನ್ನೂ ದೀರ್ಘವಾಗಿ ಬಸವಣ್ಣನ ಜೀವನಕ್ಕೆ ಸಂಬಂಧಪಟ್ಟ ವಿಚಾರಗಳನ್ನು ನೋಡಬಹುದು.

**ಹೊನ್ನವಾಡಿಯ ಶಾಸನ (೧೦೪೯) :**

''ವಿನುತಾನೇಕ ವೇದವೇದಾಂಗ ತತ್ವಜ್ಞಾನ ಮಾರ್ತಾಂಡ ಜ್ವಾಲಾಮಂಡಿತ ಪುಂಡರೀಕಾಕ್ಷ ಬ್ರಹ್ಮಲಕ್ಷಿತ ವಿಶಾಳ ವಕ್ಷಸ್ಥಳರ್ ಹಂಸಯುವತಿ ಸರಾಜಿವಿರಾಜಮಾನರಪ್ಪ ಶ್ರೀಮತ್‌ಬಾಗವಾಡಿಯ ಮಹಾಜನಮಯ್ಯೂರ್ವರುಂ '' ಈ ಪದ್ಯದಲ್ಲಿ ಬಾಗೇವಾಡಿ ಅಗ್ರಹಾರದ ಹಾಗೂ ಅಲ್ಲಿನ ವಿದ್ವಾಂಸರ ಬಗ್ಗೆ ಪ್ರಸ್ತಾಪ ಮಾಡಿದೆ ''[೨]

ಎಂದು ಹೇಳುವ ಲೇಖಕರೊಬ್ಬರು ಮುಂದೆ ಮಾದಿರಾಜ ಮತ್ತು ಮಾದಲಾಂಬಿಕೆಯರ ದಂಪತಿಗಳಿಗೆ ದೇವರಾಜನೆಂಬ ಮಗ, ನಾಗಲಾಂಬಿಕೆ ಎಂಬ ಮಗಳು ಹುಟ್ಟಿದ ಮೇಲೆ ನಂದಿಯ ವರ ಪ್ರಸಾದದಿಂದ ೧೧೩೧ ರಲ್ಲಿ ಬಸವಣ್ಣನು ಹುಟ್ಟಿದನು ಎಂಬುದನ್ನು ಈ ಶಾಸನದಿಂದ ಗುರುತಿಸಿ ವಿವರಿಸಿರುವುದನ್ನು ನಾವು ನೋಡಬಹುದು. ಅಷ್ಟೇ ಅಲ್ಲದೆ ಈ ಶಾಸನವೂ ಸಹ ಅರ್ಜುನವಾಡ ಶಾಸನವು ತಿಳಿಸಿದಂತೆ ಬಸವಣ್ಣನಿಗೆ ದೇವರಾಜನೆಂಬ ಒಬ್ಬ ಅಣ್ಣನಿದ್ದನೆಂದು ತಿಳಿಸುತ್ತದೆ.

**ಮನಗೂಳಿ ಅಥವಾ ಮಣಿಗವಳ್ಳಿ ಶಾಸನ (೧೧೪೨):**

" ಮಣಿಗವಳ್ಳಿ ಶಾಸನದಂತೆ ಬಸವ ಎಂಬ ಹೆಸರನ್ನು ನೋಡಿದಾಗ ಇವನೇ ಕಲ್ಯಾಣದ ಬಸವಣ್ಣನಿರಬಹುದೆಂದು ಡಾ.ಫ್ಲೀಟರು ಹೇಳಿದ್ದಾರೆ. ಕಾಶ್ಯಪ ಗೋತ್ರದ ಚಂದಿರಾಜ ಮತ್ತು ಚಂದ್ರಾಂಬಿಕೆಯರ ಮಗನಾಗಿ ಕಲಿದೇವರ ದೇವಾಲಯ ಕಟ್ಟಿಸಿದವನು ಎಂದು ಈ ಶಾಸನದಿಂದ ತಿಳಿದುಬರುವುದು. ಈ ಶಾಸನವು ಬಾಗೇವಾಡಿಯಿಂದ ೧೦-೧೨ ಮೈಲು ದೂರದ ಮಣಿಗವಳ್ಳಿಯಲ್ಲಿ ಇದೆ "[೩] ಹೀಗೆ "ಬಸವಣ್ಣನವರಿಗೆ ಸಂಬಂಧಿಸಿದ ಐತಿಹಾಸಿಕ ಸಂಗತಿಗಳನ್ನು ಪ್ರಸ್ತಾಪಿಸುವ ಕ್ರಿ.ಶ. ೧೨೬೦ರ ಅರ್ಜುನವಾಡ ಶಾಸನ, ಕ್ರಿ.ಶ. ೧೨೪೫ರ ಹಿರಿಯೂರು ಶಾಸನ, ಕ್ರಿ.ಶ. ೧೨೬೨ರ ಚೌಡದಾನಪುರ ಶಾಸನ, ಕಲ್ಲೇಪುರದ ಶಾಸನ, ಮಣಿಗವಳ್ಳಿ ಶಾಸನ.... ಹೀಗೆ ೧೧ ಶಾಸನಗಳನ್ನು ನಮ್ಮ ಹಿರಿಯ ಸಂಶೋಧಕರಾದ ಚಿದಾನಂದಮೂರ್ತಿ, ಕಲಬುರ್ಗಿ ಮುಂತಾದವರು ಗುರ್ತಿಸಿದ್ದಾರೆ"[೪]

ಅಷ್ಟೇ ಅಲ್ಲದೆ ಈ ಮೇಲ್ಕಂಡ ಶಾಸನಗಳಲ್ಲಿಯ ಉಲ್ಲೇಖಿತ ವ್ಯಕ್ತಿಯ ಹೆಸರುಗಳನ್ನು ಬಸವಣ್ಣನವರ ಪರ್ಯಾಯ ಪದಗಳೆಂದು ಗುರುತಿಸಲು ಅವಕಾಶವಿದೆ. ಈ ರೀತಿಯ ಪರ್ಯಾಯ ನಾಮಗಳನ್ನು ಪ್ರಸ್ತಾಪಿಸುವ ೧೧ ಶಾಸನಗಳನ್ನು ನೋಡಬಹುದು

**ಅರ್ಜುನವಾಡ ಶಾಸನ (ಕ್ರಿ.ಶ.೧೨೬೦) :**

"ಸಂಗನ ಬಸವನ ಅಗ್ರ (ಜ)
(ಲಿಂ)ಗೈಕಂ ದೇವರಾಜ ಮುನಿಪನ ತನಯಂ
ಜಂಗಮ ಪರುಸಂ (ಕಾವ )ರ
ಸಂಗಂ ಪ್ರಿಯಸುತ ನೆನಿಪ್ಪ ಕಲಿದೇವರಸಂ "

(ಅರ್ಜುನವಾಡ ಶಾಸನದ ಒಂದು ಕಂದಪದ್ಯ)

ಈ ಮೇಲಿನ ಕಂದಪದ್ಯವು ಬಂಜಗೆರೆ ಪ್ರಕಾಶ್ ಅವರು ಎತ್ತಿರುವ ಎಲ್ಲಾ ಪ್ರಶ್ನೆಗಳಿಗೆ ಉತ್ತರವನ್ನು ನೀಡುವಲ್ಲಿ ಸಾಕಷ್ಟು ಪ್ರಯತ್ನಿಸಿದಂತೆ ಇದೆ. ಈ ಪದ್ಯದಲ್ಲಿಯ ಹೇಳಿಕೆ ವಿಚಾರಗಳನ್ನು ಅನೇಕ ಮಂದಿ ವಿದ್ವಾಂಸರು, ಸಂಶೋಧಕರು ತಮ್ಮದೇ ಆದ ಜ್ಞಾನಶಕ್ತಿಯಿಂದ ಗುರುತಿಸಿ ವಿವರಣೆ ನೀಡಿದ್ದಾರೆ. ಅವರಲ್ಲಿ ಎಂ.ಎಂ. ಕಲಬುರ್ಗಿ ಅವರು ಈ ಕಂದಪದ್ಯವನ್ನು ಗಮನಿಸಿ ಬಸವಣ್ಣನವರ ವಂಶಾವಳಿಯನ್ನು ತಿಳಿಯುವ ರೇಖಾ ಚಿತ್ರವನ್ನು ಮಾರ್ಪಡಿಸಿಕೊಟ್ಟಿದ್ದಾರೆ.




''ಜಂಗಮ ಪರುಸಂ ಕಾವರ ಸಂಗಮ ಪ್ರಿಯಸುತನೆನಿಪ ಕಲಿದೇವರಸಂ '' ಎಂಬಲ್ಲಿ ತನಯಂ ಎಂಬ ಪದಕ್ಕೆ ನೇರವಾಗಿ ಮಗನೆಂದು ಪ್ರಿಯಸುತ ಎಂದರೆ ಶಿಷ್ಯನೆಂದು ಅರ್ಥೈಸಬೇಕು ಎಂದಿದ್ದಾರೆ. ಯಾವ ವ್ಯಕ್ತಿಯೇ ಆಗಲಿ ತಾನು ತನ್ನ ತಂದೆಗೆ ಪ್ರೀತಿಯ ಮಗನು ಎಂದು ಹೇಳುವುದು ಕೃತ್ರಿಮ ಎನಿಸುತ್ತದೆ ಎಂಬುದು ಅವರ ಅಭಿಪ್ರಾಯವಾಗಿದೆ. ಈ ಹಿನ್ನೆಲೆಯಲ್ಲಿ ಕಂದ ಪದ್ಯವನ್ನು ಸಂಗನ ಬಸವನ ಅಣ್ಣನಾದ ಲಿಂಗೈಕ್ಯ ದೇವರಾಜರ ಮಗನು, ಜಂಗಮ ಪುರುಷನಾದ ಕಾವರಸನಿಗೂ ಶಿಷ್ಯನೆಂಬ ಅರ್ಥದಲ್ಲಿ ಪ್ರೀತಿಯ ಮಗನು ಎನಿಸಿದ ವಿಷಯ ವ್ಯಕ್ತವಾಗುತ್ತದೆ. ಇದರಿಂದಾಗಿ ಕಲಿದೇವರಸನು ದೇವರಾಜನಿಗೆ ಉದರ ಸಂಜಾತನೂ ಕಾವರಸನಿಗೆ ಕರಸಂಜಾತನೂ ಆಗಿರುವನೆಂಬ ಅರ್ಥ ಧ್ವನಿಸುತ್ತದೆ.''[೫]

ಈ ಅರ್ಥದಲ್ಲಿ ಹೊರಡುವ ಸಂಗತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಎಂ.ಎಂ. ಕಲಬುರ್ಗಿ ಅವರು ಬಸವಣ್ಣನವರ ವಂಶಾವಳಿಯನ್ನು ತಿಳಿಸಿದವರಲ್ಲಿ ಪ್ರಮುಖರಾಗಿದ್ದಾರೆ.

ಇಲ್ಲಿನ ಸಂಗನ ಬಸವ, ಹಾಲ ಬಸವಿ ಮತ್ತು ಕರಸಂಚಾತ, ಉದರ ಸಂಜಾತ ಎಂಬ ಪದಗಳಿಗೆ ಅಪಾರ್ಥವನ್ನು ಕಲ್ಪಿಸಿದ ಬಂಜಗೆರೆ ಜಯಪ್ರಕಾಶ್ ಅವರು ಸಿಂದ್ ಪ್ರಾಂತ್ಯದ ಮಾದಿಗ ಜನಾಂಗದಲ್ಲಿ ಇಂದಿಗೂ ದೇವರ ಸೇವೆಗೆ ಅಂಕಿತರಾದವರನ್ನು (ದೇವದಾಸ, ದೇವದಾಸಿ) 'ಬಾಲಬಸಪ್ಪ', 'ಬಸವಿ' ಎಂದು ಕರೆಯುವ ಪದ್ಧತಿ ಇದೆ ಎಂದು ಹೇಳುತ್ತಾರೆ. 'ಬಸವ' ಎಂಬ ಪದ ಮಾದಿಗ ಜನಾಂಗಕ್ಕೆ ಸೇರಿದುದ್ದಾಗಿರಬೇಕು ಮತ್ತು ಬಸವಣ್ಣನವರು ತಮ್ಮ ವಚನಗಳಲ್ಲಿ ಹೆಚ್ಚಾಗಿ ಮಾದಾರ ಚನ್ನಯ್ಯನನ್ನು ಎನ್ನ ತಂದೆ ಎಂದು ಕರೆದುಕೊಂಡಿದ್ದಾರೆ. ಅಷ್ಟೇ ಅಲ್ಲದೆ ಅವರ ನಿಜವಾದ ತಂದೆ -ತಾಯಿಗಳೆಂದು ಹೇಳುವ (ಮಾದರ)ಸ, (ಮಾದ)ಲಾಂಬಿಕೆ ಇವುಗಳನ್ನೆಲ್ಲಾ ಒಟ್ಟಾರೆಯಾಗಿ ತಳಸ್ಪರ್ಶಿಸಿದಾಗ ಬಸವಣ್ಣ ಮಾದಿಗ ಜನಾಂಗಕ್ಕೆ ಸೇರಿದವರಿರಬೇಕು ಮತ್ತು ಮಾದಾರ ಚನ್ನಯ್ಯನೆ ನಿಜವಾದ ತಂದೆ ಎಂದು ಊಹಿಸಬಹುದು ಎಂದು ಹೇಳುವ ಇವರು, ಮುಂದೆ ಆದರೂ ಸಹ ಇದರ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆಯಬೇಕಾಗಿದೆ ಎಂದು

ಹೇಳುತ್ತಾರೆ. ಇವರ ಹೇಳಿಕೆಗಳನ್ನು ಒಪ್ಪಿಕೊಳ್ಳಲು ಬೇಕಾದ ಆಕರ ಸಾಮಾಗ್ರಿಗಳು, ದಾಖಲೆಗಳು ಇನ್ನೂ ಸತ್ಯಾಸತ್ಯತೆಯಿಂದ ಕೂಡಿಲ್ಲ ಎಂದು ಹೇಳಬಹುದು. ಅದರಲ್ಲಿಯೂ ಸಹ ಇವರು ನೀಡುವ ವ್ಯಾಖ್ಯಾನಗಳು ಅನುಮಾನ, ಊಹೆ, ಕಲ್ಪನೆಗಳಿಂದ ರಚಿತವಾದಂತಹವುಗಳೇ ಆಗಿವೆ ಮತ್ತು ಇವು ಸಹ ನೋಡಬಹುದು, ಗುರುತಿಸಬಹುದು, ತಿಳಿಯಬಹುದು, ಆಶ್ಚರ್ಯವಾಗಿದೆ ಎಂದು ತಮ್ಮ ಸಂಶಯವವನ್ನು ವ್ಯಕ್ತಪಡಿಸಿದ ಹೇಳಿಕೆಗಳೇ ಆಗಿವೆ. ಇವರ ಈ ವಾದಗಳಿಗೆ ಅನೇಕ ವಿದ್ವಾಂಸರು ಹಲವು ರೀತಿಯ ಪ್ರಶ್ನೆಗಳನ್ನು ಎತ್ತಿ ಸಮರ್ಥನೆಯನ್ನು ನೀಡಿದ್ದಾರೆ. ಅವುಗಳಲ್ಲಿ ಕೆಲವನ್ನು ಈ ಕೆಳಕಂಡಂತೆ ತಿಳಿಯಬಹುದು. ಉದಾ : ಮಾದಾರ ಚನ್ನಯ್ಯನನ್ನು ತಂದೆ ಎಂದು ಒಪ್ಪಿಕೊಳ್ಳಬೇಕಾದರೆ ಅವರ ತಾಯಿ ಯಾರು ?, ಮಾದಾರ ಚನ್ನಯ್ಯನನ್ನು ವಚನಗಳಲ್ಲಿ ಪ್ರಸ್ತಾಪಿಸಿಕೊಂಡಂತೆ ತಾಯಿಯನ್ನು ಏಕೆ ಪ್ರಸ್ತಾಪಿಸಿಲ್ಲ? ಸಮಕಾಲೀನ ಮತ್ತು ಪುರಾಣ ಸಾಹಿತ್ಯ ಕೃತಿಗಳೆಲ್ಲಾ ಏಕೆ ಶೈವಾಗಮಾಚಾರ್ಯ ಮಾದರಸ, ಮಾದಲಾಂಬಿಕೆಯರ ಬಸುರಲ್ಲಿ ಬಂದವನೆಂದು ಹೇಳುತ್ತವೆ ? ಮತ್ತು ಮಾದಾರ ಚನ್ನಯ್ಯನನ್ನು ಕುರಿತು ಪ್ರೀತಿಯಿಂದ ರಗಳೆಯಲ್ಲಿ ರಚಿಸಿದ ಹರಿಹರ ಕವಿ ಬಸವಣ್ಣನನ್ನು ಸಹ  ಮಾದಾರ ಬಸವಣ್ಣ ರಗಳೆ ಎಂದೇಕೆ ಬರೆಯಲಿಲ್ಲ ?, ಹಾಗೂ ಮಾದಾರ ಚೆನ್ನಯ್ಯನಿಗೆ  ಮಾದಾರ ಚೆನ್ನಯ್ಯನ ವಚನಗಳಲ್ಲಾಗಲೀ, ಸಮಕಾಲೀನ ವಚನಕಾರರ ವಚನಗಳಲ್ಲಾಗಲೀ ಅಥವಾ ಪುರಾಣ ಕಾವ್ಯಗಳಲ್ಲಾಗಲೀ ಬಸವಣ್ಣ ಎಂಬ ಮಗನಿದ್ದನು ಎಂಬುದೇಕೆ ಎಲ್ಲಿಯೂ ಪ್ರಸ್ತಾಪವಾಗಿಲ್ಲ? ಇನ್ನೂ ಮುಂತಾಗಿ ಪ್ರಗತಿಪರ ಸಮಾಜವಾದಿಗಳು ಪ್ರಶ್ನೆಗಳನ್ನು ಎತ್ತಿದ್ದಾರೆ. ಬಸವಣ್ಣ ಇದುವರೆಗೂ ತನ್ನ ಯಾವ ವಚನಗಳಲ್ಲಿಯೂ ತನ್ನ ವೈಯಕ್ತಿಕ ಜೀವನದ ವಿಷಯಗಳನ್ನು ಹೇಳಿಕೊಂಡಿಲ್ಲದೆ ಇರುವುದು ಇಷ್ಟೆಲ್ಲಾ ವಿವಾದಗಳಿಗೆ ಕಾರಣವಾಗಿದೆ. ಒಟ್ಟಾರೆಯಾಗಿ ಈ ಎಲ್ಲಾ ಹೇಳಿಕೆ, ವಿಶ್ಲೇಷಣೆಗಳಿಗೆ ಇನ್ನೂ ಗಂಭೀರವಾದ ಸಂಶೋಧನೆಗಳಿಂದ ಅಧ್ಯಯನ ನಡೆಯಬೇಕಾಗಿದೆ.

**೫.೨ ವಚನಗಳ ಆಧಾರ :**

ಬಸವಣ್ಣ ಶೈವ ಬ್ರಾಹ್ಮಣ, ಇಂಗಳೇಶ್ವರ / ತ್ರಿಂಗಳೇಶ್ವರ / ಅಗ್ರಹಾರ ಬಾಗೇವಾಡಿಯ ಕಮ್ಮೆಕುಲದ ಶೈವ ಬ್ರಾಹ್ಮಣನಾದ ಮಾದರಸ -ಮಾದಲಾಂಬಿಕೆಯರು ಬಸವಣ್ಣನ ತಂದೆ-ತಾಯಿಗಳು ಎಂಬುದಕ್ಕೆ ನಮಗಿರುವ ಪ್ರಮುಖ ಆಧಾರಗಳೆಂದರೆ, ಸ್ವರಚಿತ ವಚನಗಳು ಹಾಗೂ ಸಮಕಾಲೀನ ವಚನಕಾರರ ವಚನಗಳು. ಅವುಗಳಲ್ಲಿ ಕೆಲವನ್ನು ಈ ಕೆಳಕಂಡಂತೆ ತಿಳಿಯಬಹುದು.

ಬಸವಣ್ಣನವರು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ್ದರೆಂಬುದು ಒಂದು ಹೆಗ್ಗಳಿಕೆಯ

ಸಂಗತಿಯಲ್ಲ. ಹಾಗೆಯೇ ಮಾದಿಗ ಜಾತಿಯಲ್ಲಿ ಹುಟ್ಟಿದರೆನ್ನುವುದೂ ಸಂಭ್ರಮಿಸುವ ಅಥವಾ ತಿರಸ್ಕಾರ ಮನೋಭಾವದಿಂದ ನೋಡುವ ಸಂಗತಿಯಲ್ಲ. ಇದೇ ರೀತಿ ಇವರಿಗಿಂತ ಮುಂಚೆಯೇ ಅನೇಕ ವಿದ್ವಾಂಸರು ಬಸವಣ್ಣನವರನ್ನು ಮೂಲತಃ ಪಾಂಚಾಲರು ಅಥವಾ ವಿಶ್ವಕರ್ಮರೆಂದೂ, ಅಲ್ಲ ಕುರುಬರೆಂದೂ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು , ಅನಂತರ ಆ ವಿಷಯಗಳು ಅಲ್ಲಿಗೇ ತಣ್ಣಗಾದದ್ದು ಹಲವರಿಗೆ ತಿಳಿದಿರುವಂತದ್ದೇ ಆಗಿದೆ. ಹಾಗೆಯೇ ಎಂ.ಚಿದಾನಂದಮೂರ್ತಿಯವರು ತಮ್ಮ ಒಂದು ಲೇಖನದಲ್ಲಿ ''ಬಸವಣ್ಣನವರು ತಮ್ಮ ಹೆಸರು 'ಬಸವ ' ಅಲ್ಲವೆಂದೂ ಕಾಟುಕ, ಕೇತುಕ, ಪೋಲುಗ ಎಂಬಿತ್ಯಾದಿ ಹೆಸರುಗಳಿಂದ ಕರೆದುಕೊಂಡಿದ್ದಾನೆ ''[೬] ಎಂದು ಗುರುತಿಸಿದ್ದಾರೆ. ಆದರೆ ಇವೆಲ್ಲವೂ ಸಹ ಸಮಾಜದಲ್ಲಿ ಬಿದ್ದುಹೋದ ಮಾತುಗಳೇ ಆಗಿವೆ. ಹಾಗೆಯೇ 'ಆನುದೇವಾ ಹೊರಗಣವನು ' ಪ್ರಬಂಧವೂ ಸಹ ಎಂದು ಹೇಳಬಹುದು.

ಪ್ರಬಂಧದ ಪುಟ ಒಂದರಲ್ಲಿ ''ಬಸವಣ್ಣನು ಬ್ರಾಹ್ಮಣ ಜಾತಿಯವನೆಂದು ಕಲ್ಪಿಸುವುದಕ್ಕೆ ನಮ್ಮಲ್ಲಿದ್ದ ಸಾಕ್ಷ್ಯಾಧಾರಗಳೆಲ್ಲಾ ವಾಸ್ತವವಾದವುಗಳಲ್ಲ '' ಎಂದು 'ಲೇಖಕರ ಮಾತಿನಲ್ಲಿ ' ಹೇಳಲಾಗಿದೆ. ಅನಂತರ ಪ್ರಬಂಧದ (ಪುಟ ೬೫) ರಲ್ಲಿ '' ನೀಲಾಂಬಿಕೆ ಮಾತ್ರ ತನ್ನ ಒಂದು ವಚನದಲ್ಲಿ ಬಸವಣ್ಣನು ಮಾದರಸ, ಮಾದಲಾಂಬೆಯರ ಮಗನೆಂದು ಹೇಳಿದ್ದಾಳೆ. ಬಸವಣ್ಣ ಅಥವಾ ಅವರ ಸಮಕಾಲೀನ ವಚನಕಾರರು ಎಲ್ಲೂ ಈ ಪ್ರಸ್ತಾಪ ಮಾಡಿಲ್ಲ '' ಎಂದು ಲೇಖಕರು ಹೇಳಿರುವುದು ಒಂದು ರೀತಿಯಲ್ಲಿ ಆಭಾಸವಾಗಿದ್ದು, ವಿವಾದಗಳಿಗೆ ಎಡೆ ಮಾಡಿಕೊಟ್ಟಿರುವ ಅಂಶಗಳಲ್ಲಿ ಒಂದು ಎನ್ನಬಹುದು. ಈ ವಿಷಯವನ್ನು ಮನಗಂಡ ಪ್ರೊ॥ಜಿ.ಎಸ್.ಸಿದ್ಧಲಿಂಗಯ್ಯನವರು ''ಬಂಜಗೆರೆ ಅವರು ನೀಡುವ ಈ ವಾಕ್ಯವು ಕಂಸದೊಳಗಿದೆ. ಆಶ್ಚರ್ಯವೆಂದರೆ, ನೀಲಾಂಬಿಕೆಯ ಯಾವ ವಚನದಲ್ಲಿಯೂ ಮಾದರಸ-ಮಾದಲಾಂಬೆಯರ ಪ್ರಸ್ತಾಪ ಇಲ್ಲ '' ಎಂಬುದನ್ನು ಸೂಚಿಸಿದ್ದಾರೆ. ಹಾಗೆಯೇ ಈ ಪ್ರಸ್ತಾಪ ಬರುವುದು ನೀಲಾಂಬಿಕೆಯ ವಚನದಲ್ಲಿ ಅಲ್ಲ , ಗಂಗಾಂಬಿಕೆಯ ವಚನದಲ್ಲಿ ಎಂದು ತಿಳಿಸಿದ್ದಾರೆ. ಇವರು ನೀಡುವ ಆ ವಚನ ಹೀಗಿದೆ.

'' ಸಾಂದ್ರವಾಗಿ ಹರಗಣ ಭಕ್ತಿಯ ಮಾಳ್ಪನೆಂತೊ
ಮಾದಲಾಂಬಿಕಾನಂದನನು ?
ಸಾಂದ್ರವಾಗಿ ಬಿಜ್ಜಳನರಮನೆಯ ನ್ಯಾಯ ನೋಳ್ಪನೆಂತೊ
ಮಾದರಸನ ಮೋಹದ ಮಗನು ?
ಸಾಂದ್ರವಾಗಿ ಲಿಂಗಾರ್ಚನೆ ಲಿಂಗತೃಪ್ತಿ ಅನುಗೈಯ್ವನೆಂತೊ
ಗಂಗಾಪ್ರಿಯ ಕೂಡಲ ಸಂಗನ ಶರಣ ಚೆನ್ನ ? ''

-ಗಂಗಾಂಬಿಕೆ

ಮಾದರಸ -ಮಾದಲಾಂಬಿಕೆ ಎಂದಿದೆಯೇ ಹೊರತು ಮಾದಾಂಬೆಯರ ಮಗ ಎಂದಿಲ್ಲ. ಅಂದರೆ ಉಲ್ಲೇಖಿಸುವಾಗ ಲೇಖಕರಿಗೆ ಇರಬೇಕಾದ ಎಚ್ಚರ ಏನೇನೂ ಇಲ್ಲದಿರುವುದು ಗಮನಾರ್ಹವಾದುದಾಗಿದೆ "೭

ಇನ್ನು ಎರಡನೆಯದಾಗಿ ಬಂಜಗೆರೆ ಜಯಪ್ರಕಾಶ್ ಅವರ ವಾದ ಬಸವಣ್ಣ ಹಾಗೂ ಅವನ ಸಮಕಾಲೀನರು ಈ ಪ್ರಸ್ತಾಪ ಎಲ್ಲೂ ಮಾಡಿಲ್ಲವೆನ್ನುವುದು. ಇದಕ್ಕೆ ಉದಾಹರಣೆಯಾಗಿ ಬಸವಣ್ಣನು ತನ್ನನ್ನು ತನ್ನ ವಚನಗಳಲ್ಲಿ ಅನೇಕ ಕಡೆ ನಾನು ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ್ದರೂ ಕೆಳ ಜಾತಿಗೆ ಸೇರಿದವನು ಎಂದು ತನ್ನನ್ನು ತಾನೇ ವಿಡಂಬಿಸಿಕೊಂಡಿರುವ ವಚನಗಳನ್ನು ಗುರುತಿಸಬಹುದು. ಹಾಗೆಯೇ ಶರಣರಿಗಿಂತ ಕೀಳು ಕುಲದವನು ಎಂದೂ, ಶರಣರೇ ಕುಲಜರು ಎಂದೆಲ್ಲಾ ಹೇಳಿಕೊಂಡಿರುವುದನ್ನು ಬಸವಣ್ಣನ ಸ್ವರಚಿತ ವಚನಗಳಿಂದ ತಿಳಿಯಬಹುದು.

" ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ,
ವೃತಾಯ ಬರುದೊರೆ ಹೋಹ ಕೆಡುಕ ಹಾರುವ ನಾನಲ್ಲ
ಹಾರುವೆನಯ್ಯಾ ಭಕ್ತರ ಬರವ ಗುಡಿಗಟ್ಟಿ,
ಹಾರುವೆನಯ್ಯಾ ಶರಣರ ಬರವ ಗುಡಿಗಟ್ಟಿ,
ಕೂಡಲ ಸಂಗಮದೇವನು ವಿಪ್ರಕರ್ಮವ ಬಿಡಿಸಿ ,
ಅಶುದ್ಧನ ಶುದ್ಧನ ಮಾಡಿದನಾಗಿ "

ಬ.ವ. ೧-೨೧೬

ಎಂದು ತನ್ನನ್ನು ತಾನು ವಿಡಂಬಿಸಿಕೊಂಡಿದ್ದಾನೆ. ಎನ್ನಯ ಶರೀರದ ಅಜ್ಞಾನವನ್ನು ದೂರ ಮಾಡಿಕೊಳ್ಳಲು ಅರಿಯದಾದೆನು ಜೀವದ ನಿಲುವು. ಹೀಗೆಂದು ತಿಳಿಯದಾದೆನು, ಮನಸ್ಸಿನ ಸೂತಕವನ್ನು ಪರಿಹರಿಸದಾದೆನು. ನೀನೇ ನನ್ನ ವಿಪ್ರ ಕರ್ಮವ (ಬ್ರಾಹ್ಮಣತ್ವ ) ಬಿಡಿಸಿ ಅಶುದ್ಧನಾಗಿದ್ದ ನನ್ನನ್ನು ಶುದ್ಧ ಶರಣನಾಗಿ ಮಾಡಿರುವೆ ಎಂದು ಹೇಳಿರುವುದನ್ನು ನೋಡಬಹುದು. ಹಾಗೆಯೇ ಇನ್ನೊಂದು ವಚನದಲ್ಲಿ ನನ್ನನ್ನು ಈ ಲೋಕದ ಜನತೆ ಇವನ್ಯಾರು, ಇವನ್ಯಾರು ಎನ್ನುವಂತೆ ಮಾಡಬೇಡ ಎಂದಿದ್ದಾರೆ.

"ಇವನಾರವ, ಇವನಾರವ ಇವನಾರವನೆಂದೆನಿಸದಿರಯ್ಯಾ
ಇವ ನಮ್ಮವ, ಇವನಮ್ಮವ ಇವನಮ್ಮವನೆಂದೆನಿಸಯ್ಯಾ
ಕೂಡಲ ಸಂಗಮದೇವಾ ನಿಮ್ಮ ಮನೆಯ ಮಗನೆನಿಸಯ್ಯಾ "೮

ಎಂದುಬಸವಣ್ಣನವರು ತಮ್ಮನ್ನು ಹೀಗೆ ಕರೆಯುವಂತೆ ಮಾಡು, ನನ್ನನ್ನು ಎಲ್ಲರೂ ತಮ್ಮ ಮನೆಯ ಮಗನು ಎಂದು ಕರೆಯುವಂತೆ/ಭಾವಿಸುವಂತೆ ಮಾಡು ಎಂದು ತನ್ನ ಇಷ್ಟ ದೈವನಾದ ಕೂಡಲ ಸಂಗಮ ದೇವನಲ್ಲಿ ಬೇಡಿಕೊಂಡಿದ್ದಾರೆ. ಹಾಗೆಯೇ ಇನ್ನೂ

ಅನೇಕ ವಚನಗಳಲ್ಲಿ ತನ್ನಲ್ಲಿ ಅಡಗಿರುವ ಭಕ್ತಿಯನ್ನು ಗುರುತಿಸಿ ನನ್ನನ್ನು ಗುರುತಿಸಬೇಕೇ ವಿನಃ ನನ್ನ ಹುಟ್ಟಿನ ಜಾತಿಯಿಂದಲ್ಲ ಎಂದು ಲೋಕದ ಜನತೆಗೆ ತಿಳಿಹೇಳಿದ್ದಾರೆ. ಅದೇ ರೀತಿ ಎಲ್ಲರನ್ನೂ ಸಹ ಅವರವರ ಭಕ್ತಿ ಸದ್ಗುಣಗಳಿಂದ ಗುರುತಿಸಬೇಕು. ಅವರ ವೃತ್ತಿ, ಜಾತಿಯಿಂದಲ್ಲ ಎಂದು ತಿಳಿಸಿದ್ದಾರೆ.

ಮೂರನೆಯದಾಗಿ ಸಮಕಾಲೀನ ವಚನಕಾರರು ಬಸವಣ್ಣನ ಜಾತಿಯನ್ನು ಎಲ್ಲೂ ಪ್ರಸ್ತಾಪ ಮಾಡಿಲ್ಲ ಎಂದು ಲೇಖಕರು ತಮ್ಮ ಪ್ರಬಂಧದಲ್ಲಿ ಹೇಳಿರುವರು. ಆದರೆ ಬಸವಣ್ಣನವರ ಸಮಕಾಲೀನ ವಚನಕಾರರು ಬಸವಣ್ಣನನ್ನು ಕುರಿತು ತಮ್ಮ ವಚನಗಳಲ್ಲಿ ಆತನ ತಂದೆ-ತಾಯಿ, ಸ್ಥಳ ಹಾಗೂ ಜಾತಿಯನ್ನು ಕುರಿತು ಪ್ರಸ್ತಾಪ ಮಾಡಿದ್ದಾರೆ ಎಂಬುದಕ್ಕೆ ಇರುವ ಕೆಲವು ವಚನಗಳನ್ನು ಈ ಕೆಳಕಂಡಂತೆ ಉದಾಹರಿಸಬಹುದು.

“ ಕರವೂರ ನಿರಹಂಕಾರ -ಸುಜ್ಞಾನಿದೇವಿಯರ
ಬಸುರಲ್ಲಿ ಬಂದೆರೆನ್ನಬಹುದೆ ಪ್ರಭುದೇವರ ?
ಮಂಡಗೆಯ ಮಾದಿರಾಜ -ಮಾದಲಾಂಬಿಕೆಯಮ್ಮನವರ
ಬಸುರಲ್ಲಿ ಬಂದರೆನ್ನಬಹುದೆ ಬಸವೇಶ್ವರನ ?
ಅಕ್ಕ ನಾಗಲಾಂಬಿಕೆಯಮ್ಮನ ಬಸುರಲ್ಲಿ
ಬಂದರೆನ್ನಬಹುದೆ ಚೆನ್ನ ಬಸವೇಶ್ವರನ ? ”
........................................................ (ಸಂ.ವ.ಸಂ. -೨.ವ.ಸಂ.೪೪೮)

-ಘಟ್ಟಿವಾಳಯ್ಯ

ಈ ಮೇಲಿನ ಘಟ್ಟಿವಾಳಯ್ಯನ ವಚನದಲ್ಲಿ ಕೆಲವು ಮಹತ್ವಪೂರ್ಣವಾದ ಅಂಶಗಳಿವೆ. ಆದರೂ ಅಕ್ಕ ನಾಗಾಂಬಿಕೆಯ ಗಂಡನ ಹೆಸರು ಅಥವಾ ಚೆನ್ನಬಸವಣ್ಣನ ತಂದೆಯ ಹೆಸರನ್ನು ಏಕೆ ಈ ವಚನದಲ್ಲಿ ಪ್ರಸ್ತಾಪ ಮಾಡಿಲ್ಲ ಎಂಬ ಪ್ರಶ್ನೆ ಎದ್ದು ಕಾಣುತ್ತದೆ. ಏನೇ ಆಗಲಿ ಬಸವಣ್ಣನು ಮಂಡಿಗೆಯ ಮಾದರಸ -ಮಾದಲಾಂಬಿಕೆಯರ ಮಗನೆಂಬುದಕ್ಕೆ ಇಲ್ಲಿ ಸ್ಪಷ್ಟವಾದ, ಬಲವಾದ ಸಾಕ್ಷಿಯಾದ ದಾಖಲೆ ಸಿಗುತ್ತದೆ. ಹಾಗೆಯೇ ಇನ್ನೊಬ್ಬ ಸಮಕಾಲೀನ ವಚನಕಾರನಾದ ಮಡಿವಾಳ ಮಾಚಿದೇವರ ವಚನವೊಂದರಲ್ಲಿ ಸುದೀರ್ಘವಾದ ಬಸವಣ್ಣನ ಬಗೆಗೆ ವಿಶ್ಲೇಷಣೆ ಮಾಡಲಾಗಿದೆ. ಆದರೆ, ಇಲ್ಲಿ ಆತನ ತಂದೆ -ತಾಯಿಗಳ ಹೆಸರನ್ನು ಉಚ್ಚರಿಸುವ ಸಾಲುಗಳನ್ನಷ್ಟೇ ನೋಡಬಹುದು.

“............ ಶೈವಾಗಮಾಚಾರ್ಯ ಮಂಡಗೆಯ ಮಾದರಸನ
ಸತಿ ಮಾದಲಾಂಬಿಕೆಯ ಗರ್ಭದಿಂದವತರಿಸಿದ

ಬಸವಣ್ಣನೆಂಬ ನಾಮಕರಣಮಂ ಧರಿಸಿ............ ''

(ವಚನ ೫೭೦- ಪುಟ : ೨೧೭)

ಇಲ್ಲಿ ಬಸವಣ್ಣನ ಜಾತಿ, ತಂದೆ -ತಾಯಿ ಹೆಸರನ್ನು ಹಾಗೂ ಆತನು ಮಾದಲಾಂಬಿಕೆಯ ಗರ್ಭದಿಂದ ಅವತರಿಸಿದನೆಂಬುದಕ್ಕೆ ಬಲವಾದ ಹೇಳಿಕೆ ಇದೆ. ಲೇಖಕರು ಬಸವಣ್ಣ ಹಾಗೂ ಅವನ ಸಮಕಾಲೀನ ವಚನಕಾರರು ಆತನ ಜಾತಿಯನ್ನು ಕುರಿತು ಎಲ್ಲಿಯೂ ಪ್ರಸ್ತಾಪ ಮಾಡಿಲ್ಲ ಎಂಬ ಹೇಳಿಕೆಗೆ ತದ್ವಿರುದ್ಧವಾಗಿ ಸ್ವತಃ ಬಸವಣ್ಣ, ಗಂಗಾಂಬಿಕೆ, ನೀಲಾಂಬಿಕೆ, ಮಡಿವಾಳ ಮಾಚಿದೇವರ ಮತ್ತು ಘಟ್ಟಿವಾಳಯ್ಯನವರ ಕೆಲವೊಂದು ವಚನಗಳನ್ನು ನೋಡಿದಾಗ ಜಯಪ್ರಕಾಶ್ ಅವರ ಈ ಹೇಳಿಕೆ ಸತ್ಯಕ್ಕೆ ದೂರವಾದುದು ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಇಷ್ಟೇ ಅಲ್ಲದೆ ನೀಲಾಂಬಿಕೆ, ಚೆನ್ನಬಸವಣ್ಣ, ಅಕ್ಕನಾಗಮ್ಮನವರ ವಚನಗಳಲ್ಲಿಯೂ ಸಹ ಬಸವಣ್ಣನ ಬಗ್ಗೆ ಪ್ರಸ್ತಾಪವಿರುವ ಭಾಗಗಳನ್ನು ನೋಡಬಹುದು.

ನಾಲ್ಕನೆಯದಾಗಿ ಬಸವಣ್ಣನವರ ಸಮಕಾಲೀನ ಶರಣ ಹಾಗೂ ಅವರ ತುಂಬು ಗೌರವಕ್ಕೆ ಪಾತ್ರನಾಗಿದ್ದ ಕೆಳಜಾತಿಯ ಶರಣ ಎಂದು ಕರೆಸಿಕೊಂಡಿದ್ದ ವಚನಕಾರ ಡೋಹರ ಕಕ್ಕಯ್ಯನವರು ತಮ್ಮ ಒಂದು ವಚನದಲ್ಲಿ ,

'' ಕಷ್ಟ (ಕೀಳು) ಕುಲದಲ್ಲಿ ಹುಟ್ಟಿದ ತನ್ನ ಕರ್ಮವನ್ನು

ಕಳೆದು ತನ್ನನ್ನು ಮುಟ್ಟಿ ಪಾವನ ಮಾಡಿ, ತನ್ನ

ಕರಸ್ಥಲಕ್ಕೆ ಲಿಂಗವನ್ನು ಕೊಟ್ಟವನು ಬಸವಣ್ಣ'' ಎಂದು ಗೌರವದಿಂದ ಕರೆದುಕೊಂಡಿದ್ದಾನೆ. (ಶರಣರು ಕಂಡ ಬಸವಣ್ಣ (ಸಂ) ಹೆಚ್.ಡಿ. ಚಂದನಗೌಡರು, ದಿ. ಮು. ೨೦೦೧ ವಚನ ಸಂಖ್ಯೆ ೫೫೭). 'ಬಸವಣ್ಣನವರು ಹುಟ್ಟಿನಿಂದ ಬ್ರಾಹ್ಮಣರಲ್ಲ , ಮಾದಿಗ ಮೂಲದವನು ಇರಬೇಕು ' ಎಂಬುದು ಬಂಜಗೆರೆ ಪ್ರಕಾಶ್ ಅವರ ವಾದ. ಇದಕ್ಕೆ ಆಧಾರವೆಂಬಂತೆ ಅವರು ತಿಳಿಸಿರುವ ಅಂಶಗಳು, ಒಡ್ಡಿರುವ ತರ್ಕಗಳು, ಅವರು ನೀಡುವ ಹೇಳಿಕೆಗಳು ಅಸ್ಪಷ್ಟವಾಗಿವೆ ಎಂಬುದಕ್ಕೆ ನಮಗಿರುವ ಮೊದಲ ವರ್ಗದ ಆಧಾರಗಳೆಂದರೆ ಸ್ವರಚಿತ ಬಸವಣ್ಣನವರ ವಚನಗಳು. ಅವರ ಪತ್ನಿ ಗಂಗಾಂಬಿಕೆಯು ಹಾಗೂ ನೀಲಾಂಬಿಕೆಯ ವಚನಗಳನ್ನು ಮತ್ತು ಸಮಕಾಲೀನ ವಚನಕಾರರ ವಚನಗಳನ್ನು ಈ ಸಂದರ್ಭದಲ್ಲಿ ಮತ್ತೊಮ್ಮೆ ಮರು ವ್ಯಾಖ್ಯಾನಕ್ಕೆ ಒಳಪಡಿಸಿ ನೋಡಬೇಕಾಗಿದೆ.

**೫.೩ ಪ್ರಾಚೀನ ಕೃತಿಗಳ ಆಧಾರ :**

ಪ್ರಾಚೀನ ಕಾವ್ಯ, ಪುರಾಣ ಕೃತಿಗಳಲ್ಲಿ ಬಸವಣ್ಣನ ಜಾತಿ, ತಂದೆ -ತಾಯಿ, ಜನ್ಮ

ಸ್ಥಳದ ಉಲ್ಲೇಖಗಳನ್ನು ಗುರುತಿಸಲು ನಮಗಿರುವ ಮೂರನೆಯ ಆಧಾರವೇ ಈ ಪ್ರಾಚೀನ ಕೃತಿಗಳು. ಇವುಗಳನ್ನು ಈ ಕೆಳಕಂಡಂತೆ ತಿಳಿಯಬಹುದು.

ಹರಿಹರನ ಕಾವ್ಯದಲ್ಲಿ ಬಸವಣ್ಣ ಬ್ರಾಹ್ಮಣ ಜಾತಿಯವನು ಎಂಬ ಉಲ್ಲೇಖ ಇಲ್ಲ ಎಂಬುದು ಲೇಖಕರ ಹೇಳಿಕೆ. ಇವರಲ್ಲಿ ಯಾವುದೇ ದಾಖಲೆ ಇಲ್ಲ. ಆದರೆ ಹರಿಹರನ ಕಾವ್ಯದಲ್ಲಿ ಬಸವಣ್ಣನ ಜೀವನದ ಬಗೆಗೆ ಪೂರ್ಣ ಉಲ್ಲೇಖವಿರುವ ಭಾಗವನ್ನು ನೋಡಬಹುದು. ಇವುಗಳಲ್ಲಿ ಬಸವಣ್ಣನ ತಂದೆ -ತಾಯಿ, ಹುಟ್ಟಿದ ಕಾಲಗಳ ಉಲ್ಲೇಖಗಳು ಇವೆ. ಮತ್ತು ವಂಶಾವಳಿಯ ಚಿತ್ರಣ ಹಾಗೂ ಅಕ್ಕನಾಗಮ್ಮ -ಶಿವಸ್ವಾಮಿಯರ ಮಗ ಚೆನ್ನಬಸವಣ್ಣನೆಂಬುದಕ್ಕೆ ಸಾಕಷ್ಟು ವಿವರಗಳನ್ನೊಳಗೊಂಡ ಕೆಲವು ಪ್ರಾಚೀನ ಕೃತಿಗಳಲ್ಲಿ ಉಲ್ಲೇಖ ಇರುವ ಭಾಗಗಳನ್ನು ಮಾತ್ರ ಇಲ್ಲಿ ನೋಡಬಹುದು.

ಮೊದಲನೆಯದಾಗಿ - **'ಬಸವಸ್ತೋತ್ರ ಮಗ್ಗೆಯ ಮಾಯಿದೇವ ಪ್ರಭುವಿರಚಿತ 'ಶತಕತ್ರಯ' -ಕನ್ನಡ ಟೀಕೆ 'ವಿರಕ್ತ ತೊಂಟದಾರ್ಯ'** ಕೃತಿಗಳಲ್ಲಿ ಬಸವಣ್ಣನ ಜೀವನ ಮತ್ತು ಆತನ ಜಾತಿ ವಿಶ್ಲೇಷಣೆ ಇರುವ ಭಾಗ ಹೀಗಿದೆ.

''ಜಯ ಬಸವೇಶ ಭಕ್ತ ಜನಭಾಗ್ಯ ಶುಭೋದಯ ವೀರಶೈವ ನಿ ।
ರ್ಣಯಪರಮಾತಾರ ಶರಣಾಗತರಕ್ಷಕ ಚಿದ್ಘನಪ್ರಭಾ ॥
ಮಯ ಜಗದಾದಿದೇಶಿಕ ಪುರಾತನಪುಂಗವ ಶಾಂಭವೈ ಪುರಾ ।
ಶ್ರಯ ಜಯ ಸೋಮನಾಥ ಜಯದೇವ ಜಯವಿರತಂ ಶಿವಧವಾ ''[೬]
ಎಂದು ಪ್ರಸ್ತಾಪವಿದೆ.

ಎರಡನೆಯದಾಗಿ ಇಲ್ಲಿ ಬಸವಣ್ಣನು ವೀರಶೈವ ಧರ್ಮದಲ್ಲಿ ಜನಿಸಿದನು ಎಂಬುದನ್ನು ತಿಳಿಯಬಹುದು. ಹಾಗೆಯೇ ಹರಿಹರ ವಿರಚಿತ **'ಬಸವರಾಜ ದೇವರ ರಗಳೆ'**ಯಲ್ಲಿ ಬಸವಣ್ಣನ ಪೂರ್ತಿ ಜೀವನ ಚಿತ್ರಣ ದೊರೆಯುತ್ತದೆ. ಇದು ಅತ್ಯಂತ ಪ್ರಾಚೀನವಾದ ಕೃತಿಯೆನ್ನಬಹುದು.

''ಬಂದು ಭೂಲೋಕದೊಳು ಕೀರ್ತಿಯಂ ಪಡೆದಿರ್ಪ
ಸಂದಣಿಪ ವಿಪ್ರರ ಸಂತಾನದಿಂದಿಡಿದಿರ್ಪ
ಶಿವಶಾಸ್ತ್ರ ಘೋಷ ಸಂಗೀತದಿಂದಿಡಿದಿರ್ಪ
ಶಿವ ಪುರಾಣಾಗಮಕುಳಂಗಳಿಂದೆಸೆದಿರ್ಪ

ಅಗ್ರಹಾರಂ ಬಾಗೇವಾಡಿಯೊಳಗೆಸೆದಿರ್ಪ
ನಗ್ರೇಸರಂ ಕಮ್ಮೆ ಕುಲದಿಂದ ಮೆರೆದಿರ್ಪ
ವಿಪ್ರನಿಪ್ಪಂ ಮಾದಿರಾಜನಾತನ ಸತಿಯು
ಅತಿಮಾನಿಯ ದಾಯೆಂದೆನಿಪ್ಪಾ ಪತಿಯ
ಪತಿಭಕ್ತಿಯುದರದೊಳು ಪುಗಲಲ್ಲಿ ಗುಣವತಿಯ ''[೧೦]

(ಪ್ರಥಮ ಸ್ಥಳಂ ೯೧-೧೦೦ ನೇ ಸಾಲು)

ಈ ಮೇಲಿನ ಹರಿಹರನ 'ಬಸವರಾಜ ದೇವರ ರಗಳೆ'ಯಲ್ಲಿ ಬಸವಣ್ಣನು ಅಗ್ರಹಾರ ಬಾಗೇವಾಡಿಯಲ್ಲಿ ವಾಸವಾಗಿದ್ದ, ಕಮ್ಮೆಕುಲದ ಶೈವ ಬ್ರಾಹ್ಮಣ ಮಾದಿರಾಜ ಮತ್ತು ಆತನ ಸತಿ ಮಾದಾಂಬೆಯರ ಮಗನಾಗಿ ಬಸವಣ್ಣನು ಜನಿಸಿದನು ಎಂಬುದನ್ನು ತಿಳಿಯಬಹುದು. ಲೇಖಕರು ತಮ್ಮ ಸಂಶೋಧನಾ ಪ್ರಬಂಧದ ಒಂದು ಕಡೆ ಹರಿಹರನ ಕಾವ್ಯದಲ್ಲಿ ಬಸವಣ್ಣನು ಬ್ರಾಹ್ಮಣ ಜಾತಿಯವನು ಎನ್ನುವ ಉಲ್ಲೇಖವಿಲ್ಲ ಎಂದು ಹೇಳಿರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ.

ಮೂರನೆಯದಾಗಿ ಇದೇ ಕಾಲದಲ್ಲಿ ರಚಿತವಾದ ಪಾಲ್ಕುರಿಕೆ ಸೋಮನಾಥನ **'ಬಸವ ಪುರಾಣ'**ವನ್ನು ಡಾ. ಪಿ.ವಿ.ನಾರಾಯಣ ಅವರು ಕನ್ನಡಕ್ಕೆ ಅನುವಾದಿಸಿರುವ ಕೃತಿಯಲ್ಲಿ ಕೆಲವೊಂದು ವಚನದ ಸಾಲುಗಳು ಈ ರೀತಿ ಇವೆ.

'' ............... ಹಿಂಗುಳೇಶ್ವರ ಭಾಗವಾಡಿ
ಯೆಂಬಗ್ರಹಾರದಿ ವಿಖ್ಯಾತಿಯಿಂದ
ಲ್ಲಿದ್ದ ಮಂಡಗೆ ಮಾದಿರಾಜನೆಂಬುವನು
ಅವನ ಪರಮಸಾಧ್ವಿಸತಿಯು ಮಾದಾಂಬೆ
ಸತತ ಶಿವಾಚಾರ ಸಂಪನ್ನೆ ಧನ್ಯೆ ''

೫೫೫-೫೫೪

'' .......................................................
ಸುತನುಪನಯನವ ಶುಭಮುಹೂರ್ತದಲಿ
ನೀಡಬೇಕೆನುತತಿ ಸಡಗರಗೊಳ್ಳಲು
ತಾನಾಗ ಬಸವನು ತಂದೆಗಿಂತೆಂದ
.......................................................
ಗತಪೂರ್ವ ಜನ್ಮ ಸಂಸ್ಕಾರಗೊಂಡವಗೆ
ವಿತತ ದ್ವಿಜತ್ವವು ಪತನವೆನಿಸದೆ ''[೧೧] ೮೫೨-೮೬೦

ಇಲ್ಲಿ ಪಾಲ್ಕುರಿಕೆ ಸೋಮನಾಥನ 'ಬಸವ ಪುರಾಣಮು'ದಲ್ಲಿ ಬಸವಣ್ಣನ ವೈಯಕ್ತಿಕ ಜೀವನದ ಬಗೆಗೆ ಸಾಕಷ್ಟು ವಿಫುಲವಾಗಿ ರಚನೆಯಾಗಿದೆ. ಇಲ್ಲಿ ಬಸವಣ್ಣನ ತಂದೆ -ತಾಯಿಯ ಪ್ರಸ್ತಾಪ ಮತ್ತು ಆತನಿಗೆ ಉಪನಯನ ನಡೆಯುವ ಸಂದರ್ಭದ ಉಲ್ಲೇಖನಗಳನ್ನು ನೋಡಬಹುದು.

ನಾಲ್ಕನೆಯದಾಗಿ ಇಷ್ಟೇ ಅಲ್ಲದೆ ಇವರ ಕಾಲಕ್ಕೆ ಹತ್ತಿರದವನಾದ ಮತ್ತು 'ಬಸವ ಪುರಾಣಮು 'ವನ್ನು ಕನ್ನಡದಲ್ಲಿ ಬರೆದ ಭೀಮಕವಿಯ 'ಬಸವ ಪುರಾಣ' ದಲ್ಲಿಯೂ ಸಹ ಬಸವಣ್ಣನ ವೈಯಕ್ತಿಕ ಉಲ್ಲೇಖಗಳಿರುವ ಭಾಗಗಳನ್ನು ನೋಡಬಹುದು. ಹೀಗೆ ರಚನೆಯಾದ ಅನೇಕ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಬಸವಣ್ಣ ಬ್ರಾಹ್ಮಣ ಎಂದಷ್ಟೇ ಅಲ್ಲ, ಅದರಲ್ಲೂ ಯಾವ ಕುಲ, ಗೋತ್ರಕ್ಕೆ ಸೇರಿದವನು ಎಂಬುದನ್ನು ವಿವರವಾಗಿ, ಸ್ಪಷ್ಟವಾಗಿ ಹೇಳಿದ್ದಾರೆ ಎಂಬುದಕ್ಕೆ ನಾವು ಬಸವಪುರಾಣ, ಸಂಧಿ ಪದ್ಯ ೬೩-೬೪-೩, ಸಿಂಗಿರಾಜ ಪುರಾಣ, ಸಂಧಿ-೫, ಪದ್ಯ-೧೨ ನ್ನು ನೋಡಬಹುದು.

''ಭೀಮಕವಿ ವಿರಚಿತ 'ಬಸವ ಪುರಾಣ 'ದ ಕಾಂಡ -೧, ಸಂಧಿ-೨, ೩, ಪದ್ಯ-೪೬,೪೭ ಮತ್ತು ೩ನೇ ಸಂಧಿಯ ೨೧, ೨೩ ಪದ್ಯಗಳನ್ನು ನೋಡಿದರೆ ಬಸವಣ್ಣನು ಶೈವಾಗಮಾಚಾರ್ಯರಾದ ಮಂಡಗೆ ಮಾದಿರಾಜ ಮತ್ತು ಆತನ ಸತಿ ಮಾದಾಂಬಿಕೆಯರ ಕುಮಾರನು ಎಂಬುದಾಗಿ ತಿಳಿದುಬರುತ್ತದೆ. ''[೧೨]

ಅಷ್ಟೇ ಅಲ್ಲದೆ ಮಹಾಕವಿ ಷಡಕ್ಷರದೇವ ವಿರಚಿತ 'ಬಸವರಾಜ ವಿಜಯ ' ದಲ್ಲಿ ತ್ರಿಂಗಳೇಶ್ವರ ಭಾಗವಾಡಿಯೆಂಬ ಮಹಾಪುರದಲ್ಲಿ ಗುಣಾಕರನೆನಿಸಿರ್ದ ಮಂಡಗೆಯ ಮಾದರಸ - ಆತನ ಪತ್ನಿ ಪತಿಭಕ್ತೆ ವಿರಾಜಿತೆ ಮಾದಲಾಂಬೆಯರ ಮಗನಾಗಿ ಬಸವಣ್ಣನು ಶೈವ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದನು ಎಂದು (ದ್ವಿತೀಯಾಶ್ವಾಸಂ -೨೫-೨೬-೨೭ ಉಲ್ಲೇಖವಿರುವ ಭಾಗಗಳನ್ನು ನೋಡಬಹುದು). ಹಾಗೆಯೇ ಲಕ್ಕಣ್ಣದಂಡೇಶ ವಿರಚಿತ 'ಶಿವತತ್ವ ಚಿಂತಾಮಣಿ ', ಸಿಂಗಿರಾಜನ 'ಸಿಂಗಿರಾಜ ಪುರಾಣ', ಗುರುಚನ್ನಬಸವ ರಾಜನ ಶಿಷ್ಯ ವಿರಚಿತ 'ಬಸವ ಪವಾಡ ', ಶ್ರೀ ಮದ್ವೇದ ವ್ಯಾಸ ಮಹರ್ಷಿ ವಿರಚಿತ 'ಸ್ಕಂದ ಪುರಾಣ ' (ಬಸವೇಶ್ವರ ಚರಿತ್ರೆ ), ಹೀಗೆ ಮುಂತಾದ ಲಭ್ಯವಿರುವ ಹತ್ತಾರು ಕೃತಿಗಳನ್ನು ಪರಿಶೀಲಿಸಿದರೆ ಬಸವಣ್ಣ ಬ್ರಾಹ್ಮಣ ಜಾತಿಗೆ ಸೇರಿದ ಶೈವಬ್ರಾಹ್ಮಣನಾದ ಮಂಡಗೆಯ ಮಾದರಸ ಮಾದಲಾಂಬಿಕೆಯ ಮಗನೆಂದು ತಿಳಿದುಬರುತ್ತದೆ. ಹೀಗೆ ಅನೇಕ ಸಾಹಿತ್ಯ ಕೃತಿಗಳಿಂದ, ಶಾಸನಗಳಿಂದ, ಸ್ವರಚಿತ ವಚನಗಳಿಂದ, ಸಮಕಾಲೀನ ವಚನಕಾರರ ವಚನಗಳಿಂದ ಬಸವಣ್ಣನ ಇತಿವೃತಃವನ್ನು ತಿಳಿಯಬಹುದು.

### ೫.೪ ವಾಚ್ಯಾರ್ಥ -ಸಾಂಕೇತಿಕ ಅರ್ಥ / ನಿರಾಕಾರಣ, ಸ್ವೀಕಾರ :

ಈ ಪ್ರಬಂಧದಲ್ಲಿ ಲೇಖಕರು ವಚನಗಳ ಸಾಂಕೇತಿಕ ಅರ್ಥ ಸ್ವೀಕರಿಸದೆ, ವಾಚ್ಯಾರ್ಥ ಮಾತ್ರ ಸ್ವೀಕರಿಸಿದ್ದಾರೆ ಎಂಬುದನ್ನು ಗುರುತಿಸಬಹುದಾಗಿದೆ. ಹಾಗಾಗಿ ಅವರು ಮಾದಾರ ಚೆನ್ನಯ್ಯನ ಮನೆಯ ಮಗ ಎಂಬಂತಹ ವಾಕ್ಯಗಳನ್ನು ವಾಚ್ಯವಾಗಿ ತೆಗೆದುಕೊಂಡಿದ್ದಾರೆ ಎಂಬುದಕ್ಕೆ ಬಸವಣ್ಣನ ಒಂದು ವಚನವನ್ನು ನೋಡಬಹುದು.

''ಅಪ್ಪನು ನಮ್ಮ ಮಾದಾರ ಚೆನ್ನಯ್ಯ,
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ,
ಚಿಕ್ಕಯ್ಯ ನೆಮ್ಮಯ್ಯ ಕಾಣಯ್ಯ ,
ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ ,
ಎನ್ನ ನೇತಕ್ಕರಿಯರಿ ಕೂಡಲಸಂಗಯ್ಯ ''[೧೩]

ಬಸವಣ್ಣನ ವಚನ : ೧೭೦

ಇಲ್ಲಿ ಕೇವಲ ಮಾದಾರ ಚೆನ್ನಯ್ಯನೊಂದಿಗಿನ ತನ್ನ ಸಂಬಂಧವನ್ನು ಹೇಳಿಕೊಳ್ಳುವ ಮಾತನ್ನು ತೆಗೆದುಕೊಂಡು, ಡೋಹರ ಕಕ್ಕಯ್ಯನವರೊಂದಿಗಿನ ಸಂಬಂಧ ಹೇಳಿಕೊಳ್ಳುವ ಅಂಶವನ್ನು ಲೇಖಕರು ಕೈಬಿಟ್ಟಿರುವುದು ಯಾಕೆ ಎಂಬುದು ಇಲ್ಲಿ ಪ್ರಶ್ನೆ. ಅಂದರೆ ಬಸವಣ್ಣನವರು ಚೆನ್ನಯ್ಯನವರ ಸಂಬಂಧ ಹೇಳುವ ಮಾತಿನಿಂದ ಲೇಖಕರು ಮಾದಾರ ಜಾತಿ ಮೂಲದವರೆಂದು ಹೇಳಿದಂತೆ, ಕಕ್ಕಯ್ಯನವರ ಸಂಬಂಧ ಹೇಳುವ ಮಾತಿನಿಂದ ಅವರು ಡೋಹರ ಜಾತಿ ಮೂಲದವರೆಂದೂ ಹೇಳಬೇಕಾಗುತ್ತದೆ. ಅಲ್ಲದೆ ಇಲ್ಲಿ ಬಂಜಗೆರೆ ಅವರು ತಮ್ಮ ವಾದಕ್ಕೆ ಬೇಕಾದ ಮಾದಾರ ಚೆನ್ನಯ್ಯನವರ ಸಂಬಂಧವನ್ನು ಮಾತ್ರ ಗಣನೆಗೆ ತೆಗೆದುಕೊಂಡು ಉಳಿದವರನ್ನು ಕೈಬಿಟ್ಟಿದ್ದಾರೆ ಎಂಬುದನ್ನು ಗುರುತಿಸಬಹುದು. ಹಾಗೆಯೇ ಇವರು ಹೇಳಿದಂತೆ ಸಾಂಕೇತಿಕ ಅರ್ಥನಿರಾಕರಣ ಮಾಡಿ ವಾಚ್ಯರ್ಥವನ್ನೇ ಹಿಡಿಯುವುದಾದರೆ,

''ಎನಗಾರೂ ಇಲ್ಲ , ಎನಗಾರೂ ಇಲ್ಲ ಇಲ್ಲವೆಂಬರು ;
ಬಾಣನವ ನಾನು, ಮಯೂರನವನಾನು, ಕಾಳಿದಾಸನವನಾನು,
ಕಕ್ಕಯ್ಯ ಹಿರಿಯಯ್ಯ, ಚಿಕ್ಕಯ್ಯ ಚನ್ನಯ್ಯ ಎತ್ತಿ
ಮುದ್ದಾಡಿ ಸಲಹಿದರೆನ್ನ ಕೂಡಲ ಸಂಗಯ್ಯ''[೧೪]

ಇಲ್ಲಿ ಚೆನ್ನಯ್ಯ ಚಿಕ್ಕಯ್ಯನಾಗಿದ್ದಾನೆ. ಕಕ್ಕಯ್ಯ ಹಿರಿಯಯ್ಯನಾಗಿದ್ದಾನೆ. ಹಾಗಾದರೆ ಬಸವಣ್ಣನನ್ನು ಯಾವ ಜಾತಿಗೆ ಸೇರಿಸಬೇಕಾಗುತ್ತದೆ ? ಇದಕ್ಕೆ ಸಂಬಂಧಿಸಿದಂತೆ ಅಕ್ಕಮಹಾದೇವಿಯ ಒಂದು ವಚನವನ್ನು ಈ ಕೆಳಕಂಡಂತೆ ನೋಡಬಹುದು.

''ಬಸವಣ್ಣನೆ ಗುರು, ಪ್ರಭುದೇವರೆ ಲಿಂಗ,

ಸಿದ್ಧರಾಮಯ್ಯನೆ ಜಂಗಮ,

ಮಡಿವಾಳನೆ ಎನ್ನ ಹೆತ್ತ ತಂದೆ,

ಚನ್ನ ಬಸವಣ್ಣನೆನ್ನಪರಮಾರಾಧ್ಯರು,

ಇನ್ನು ಸುಖಿಯಾದೆನು ಕಾಣಾ ಚನ್ನಮಲ್ಲಿಕಾರ್ಜುನಯ್ಯ ''[೧೫]

ಈ ವಚನದಲ್ಲಿ ಅಕ್ಕಮಹಾದೇವಿ ಪ್ರೀತಿಯಿಂದ, ಗೌರವದಿಂದ ಮಡಿವಾಳ ಮಾಚಯ್ಯನು ನನ್ನ ಹೆತ್ತ ತಂದೆ ಎಂದು ಹೇಳಿಕೊಂಡಿದ್ದಾಳೆಯೇ ವಿನಃ ಮಡಿವಾಳನೇ ಅಕ್ಕಮಹಾದೇವಿಯ ತಂದೆಯೆಂದು ಭಾವಿಸುವುದು ಯತಾರ್ಥ ಸರಿಯಲ್ಲ. ಬಂಜಗೆರೆ ಜಯಪ್ರಕಾಶ್ ಅವರ ವಾಚ್ಯಾರ್ಥವನ್ನು ಇಲ್ಲಿಯೂ ಪ್ರಯೋಗಿಸಿದರೆ ಏನಾಗಬಹುದು? ಸ್ವತಃ ಬಸವಣ್ಣನವರೇ ತಮ್ಮ ಒಂದು ವಚನದಲ್ಲಿ ಹಿಂದಿನ ಮಹಾತ್ಮರ ಜೀವನ , ಜಾತಿ, ಕಾರ್ಯದ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಹಾಗೆಯೇ ತನ್ನನ್ನು 'ಹಾರುವ, ಬ್ರಾಹ್ಮಣರೆಂದು ಕರೆದರೆ ಕೂಡಲಸಂಗಮನು ನಗುವನಯ್ಯಾ' ಎಂದು ತನ್ನನ್ನು ತಾನೇ ವಿಡಂಬಿಸಿಕೊಂಡಿರುವುದನ್ನು ನೋಡಿದರೆ ಬಸವಣ್ಣ ಬ್ರಾಹ್ಮಣನಿರಬೇಕೆಂದು ತಿಳಿದುಬರುತ್ತದೆ. ಬಸವಣ್ಣ ಮಾದಿಗ ಜನಾಂಗದಲ್ಲಿ ಜನಿಸಿದ್ದಿದ್ದರೆ ಖಂಡಿತವಾಗಿಯೂ ತನ್ನ ವಚನಗಳಲ್ಲಿ ಇತರರನ್ನು ಹೆಸರಿಸಿದಂತೆ ತನ್ನನ್ನು ಸಹ ನಾನು ಇಂತಹ ಜಾತಿಯವನೆಂದು ಯಾವ ಸಂಕೋಚವೂ ಇಲ್ಲದೆ ಹೇಳಿಕೊಳ್ಳುತ್ತಿದ್ದನು. ವಚನಗಳಲ್ಲಿ ಬಸವಣ್ಣನವರು 'ಅಪ್ಪನು ನಮ್ಮ ಮಾದಾರ ಚೆನ್ನಯ್ಯ' ಎಂದು ಹೇಳಿಕೊಂಡಂತೆ ಇನ್ನೊಂದು ಕಡೆ 'ಅಪ್ಪನು ನಮ್ಮ ಡೋಹರ ಕಕ್ಕಯ್ಯ' ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ 'ಅಮರೇಶ್ವರದ ಆಯ್ದಕ್ಕಿ ಮಾರಯ್ಯನ ಮಗ ನಾನು ' ಎಂದೂ 'ಮಾದಾರನ ಮನೆಯ ಮಗ ನಾನು ' ಎಂದೂ ಹೇಳಿದ್ದಾರೆ. ಇಂತಹ ಮಾತುಗಳಿಗೆ ವಾಚ್ಯಾರ್ಥ ಕಲ್ಪಿಸುತ್ತಾ ಹೋದರೆ, ಎಂತಹ ಅನರ್ಥಕ್ಕೆ ದಾರಿಯಾಗಬಹುದು !. ಇದೇ ರೀತಿ ಆಧ್ಯಾತ್ಮಿಕ ಜಗತ್ತಿನ ಶರಣರ, ದಾಸರ ಹಾಗೂ ಸಂತರ ಮಾತುಗಳಿಗೆ ವಾಚ್ಯಾರ್ಥ ಸ್ವೀಕರಣ ಮಾಡುವುದಾದರೆ, 'ಕುರುಬರೋ ನಾವು ಕುರುಬರು' ಎನ್ನುವ ಪುರಂದರದಾಸರು ಮತ್ತು ತನ್ನನ್ನು , 'ಹೊಲೆಯದಾಸ' ಎಂದು ಕರೆದುಕೊಳ್ಳುವ ಕನಕದಾಸರು ಇವರುಗಳನ್ನು ಅವರು ಹೆಸರಿಸುವ ಜಾತಿಗಳಿಗೆ ಸೇರಿಸಬೇಕಾಗುತ್ತದೆ.

''ಅನೇಕ ಚಾರಿತ್ರಿಕ ವ್ಯಕ್ತಿಗಳ ಹಾಗೆಯೇ ಬಸವಣ್ಣನವರ ಚರಿತ್ರೆಯೂ ಕೂಡಾ ಕೆಲವು ತೊಡಕುಗಳಿಂದ, ಅಸ್ಪಷ್ಟತೆಗಳಿಂದ ಇವೆಯಾದರೂ, ಬಸವಣ್ಣನ ಜಾತಿ ಮೂಲದ ಬಗಗೆ ಯಾವ ತೊಡಕೂ ಇಲ್ಲ, ಅಸ್ಪಷ್ಟತೆಯೂ ಇಲ್ಲ'' ಎಂದು ಡಾ. ಬಿ.ರಾಜಶೇಖರಪ್ಪ

ಅವರು (ಬಸವಣ್ಣನವರ ಜಾತಿಮೂಲ : ಕೇವಲ ಕಾಲ್ಪನಿಕ ವಾದ ) ಎಂಬ ಲೇಖನದಲ್ಲಿ ಹೇಳಿದ್ದಾರೆ. ಶಿವಶರಣರಿಗೆ ಜಾತಿ, ಮತ, ಪಂಥ, ಕುಲ, ಗೋತ್ರ ಯಾವುದೂ ಇಲ್ಲವೆಂದು ಬಸವಣ್ಣನವರು ತಮ್ಮ ವಚನವೊಂದರಲ್ಲಿ

" ಜಾತಿಬೇಧವಿಲ್ಲ , ಸೂತಕವಿಲ್ಲ , ಅಜಾತಂಗೆ ಕುಲವಿಲ್ಲ ,

ನುಡಿದಂತೆ ನಡೆಯದಿದ್ದರೆ ಕೂಡಲ ಸಂಗಯ್ಯ ಮೆಚ್ಚ ಕಾಣಯ್ಯಾ "

"ಲಿಂಗದೇವನ ಪೂಜಿಸಿ ಕುಲವನ್ನರಸುವರೇ ಅಯ್ಯಾ

ಕೂಡಲ ಸಂಗಮದೇವನ 'ಭಕ್ತ ಕಾಯ ಮಮಕಾಯ 'ವೆಂದನಾಗಿ "

ಹೀಗೆ ಶರಣರ ಬಾವವೆಂದರೆ ಆತ್ಮಾರ್ಪಣೆಯಾಗಿದೆ. ವಿಶ್ವ ಕುಟುಂಬಿಯಾಗಿ ಅಹಂಕಾರವನ್ನು ತ್ಯಜಿಸುವುದಾಗಿದೆ. ಇಲ್ಲಿ ಬಸವಣ್ಣನವರ ಶಿವಶರಣರಿಗೆ ಯಾವುದೇ ರೀತಿಯ ಜಾತಿ, ಬೇಧ, ಸೂತಕವಿಲ್ಲವೆಂದು ಹೇಳಿದ್ದಾರೆ. ಅದೇ ರೀತಿ ಲಿಂಗವನ್ನು ಪೂಜಿಸಿ ಕುಲವನ್ನು ಅರಸುವುದೇ ಅಯ್ಯ ಇದನ್ನು ಕೂಡಲ ಸಂಗಮನಾಥನು ಮೆಚ್ಚುವುದಿಲ್ಲ ಎಂದು ಹೇಳಿರುವುದನ್ನು ಸೂಕ್ಷ್ಮವಾಗಿ ನೋಡಿದರೆ ತಿಳಿಯುತ್ತದೆ.

---

## ೫.೫ ಜಾನಪದೀಯ ಆಧಾರಗಳು

೮೦೦ ವರ್ಷಗಳಿಂದ ಇಂದಿನವರೆಗೂ ನಂಬಿಕೊಂಡು, ಆಚರಿಸಿಕೊಂಡು ಬಂದಿರುವ ಜಾನಪದೀಯ ಆಚರಣೆಗಳು ಬಸವಣ್ಣನ ಜೀವನದ ಬಗೆಗೆ ಕೆಲವು ಸಂಗತಿಗಳನ್ನು ಬಿಚ್ಚಿಡುತ್ತವೆ. ಅಂತಹವುಗಳನ್ನು ಲೇಖಕರು ಅರ್ಥೈಸಿಕೊಂಡ ರೀತಿ -ನೀತಿಗಳನ್ನು ಅವರ ಕೃತಿಗಳ ಮುಖಾಂತರವೇ ಈ ಕೆಳಕಂಡಂತೆ ತಿಳಿಯಬಹುದು.

**'ಬಸವ ' ಬಸವಿ' ಬಾಲ ಬಸಪ್ಪ :**

ಲೇಖಕರು 'ಬಸವ', 'ಬಸವಿ', 'ಬಾಲ ಬಸಪ್ಪ' ಎಂಬ ಪದಗಳನ್ನು ಅರ್ಥೈಸಿಕೊಂಡಿರುವ ಬಗೆಯಲ್ಲಿ ವ್ಯಂಗ್ಯಾರ್ಥ, ಶ್ಲೇಷಾರ್ಥವನ್ನು ನೀಡುತ್ತಾ ಹೋದರೆ ಅಪಾರ್ಥಗಳಿಗೆ ಗುರಿಯಾಗಬೇಕಾಗುತ್ತದೆ. ಇಲ್ಲಿ ಬಸವ ಎಂದರೆ ಲೇಖಕರ ದೃಷ್ಟಿಯಲ್ಲಿ (ದೇವದಾಸ ) 'ಗಂಡು ಬಸವಿ'. ಪುಟ ೪೧ ರಲ್ಲಿ ಬಸವಣ್ಣ ಮತ್ತು ಅಕ್ಕ ನಾಗಮ್ಮ ಕೂಡಲ ಸಂಗಮದಲ್ಲಿ ಆಶ್ರಯ ಪಡೆದ ಪ್ರಸಂಗವನ್ನು ವಿವರಿಸಲು ಮಹಾರಾಷ್ಟ್ರದ ಮತ್ತು ಆಂಧ್ರಪ್ರದೇಶದ ಗಡಿಪ್ರದೇಶದಲ್ಲಿರುವ ಆಚರಣೆಗಳನ್ನು ಸಮೀಕರಿಸಿರುವುದು ಸರಿಯಲ್ಲ. ಇಂತಹ ಜಾನಪದ ಆಚರಣೆಗಳು ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಒಂದೊಂದು ರೀತಿ ಪ್ರಾದೇಶಿಕವಾಗಿ ಭಿನ್ನವಾಗಿರುತ್ತವೆ. ಆದ್ದರಿಂದ ಅವು ಆ ವಲಯಕ್ಕೆ ಮಾತ್ರ ಸೀಮಿತವಾಗುತ್ತದೆ. ಮಂಟೆಸ್ವಾಮಿ, ಗೋಣಿಬಸವೇಶ್ವರ ಮುಂತಾದವರ ಕಥೆ, ಪ್ರಸಂಗಗಳನ್ನು ತಂದು ತಮ್ಮ ವಾದಕ್ಕೆ ಬೇಕಾದ ರೀತಿಯಲ್ಲಿ ಸಮರ್ಥಿಸಿಕೊಳ್ಳಲು ಪ್ರಯತ್ನಿಸಿದಂತಿದೆ. 'ಬಸವಣ್ಣ ಹಾಗೂ ನಾಗಾಯಿ ದೇವರ ಸೇವೆಗೆ ಅಂಕಿತರಾಗಿದ್ದರು' ಎಂಬುದಕ್ಕೆ ಇವರು ಕೊಡುವ ಹೇಳಿಕೆ ಈ ರೀತಿ ಇದೆ. ಬಸವಣ್ಣ 'ಗಂಡು ಬಸವಿ' ಆದ ಹಾಗೆ ಅಕ್ಕ ನಾಗಮ್ಮ ದೇವದಾಸಿ (ಬಸವಿ) ಯಾದಳು ಎಂಬುದು ಇವರ ಹೇಳಿಕೆ. ಇದಕ್ಕೆ ಪೂರಕವಾಗಿ (ಪುಟ ೭೯ ರಲ್ಲಿ) ಸಿಂಧ್ ಪ್ರಾಂತ್ಯದ ಮಾದಿಗ ಜಾತಿಯಲ್ಲಿ ಮೂಢನಂಬಿಕೆಯನ್ನು ಆಧರಿಸಿದ 'ಬಾಲಬಸಪ್ಪ ' ಮತ್ತು 'ಬಸವಿ' ಪದ್ಧತಿಯನ್ನು ಉದಾಹರಿಸಿದ್ದಾರೆ. ಹಾಗೂ 'ಕರಸಂಜಾತ ', 'ಉದರಸಂಜಾತ' ಎಂಬ ಪದಗಳ ಅರ್ಥವನ್ನು ಬದಲಾಯಿಸಿರುವುದನ್ನು ಪ್ರಬಂಧದಲ್ಲಿ ನೋಡಬಹುದು. ಡಾ.ಚಂದ್ರಶೇಖರ್ ಹೆಚ್.ಅವರು ಅಗ್ಗದ ಪ್ರಚಾರಕ್ಕಾಗಿ ಬರೆದ ಅಲ್ಲದ ಕೃತಿ 'ಆನುದೇವಾ ಹೊರಗಣವನು......' ಎಂಬ ಲೇಖನದಲ್ಲಿ ,

> ''ಜಯಪ್ರಕಾಶ್ ಅವರ ದೃಷ್ಟಿಯಲ್ಲಿ ಮಾದಿಗರಲ್ಲಿ ಗಂಡುಗಳೆಲ್ಲಾ ಗಂಡು ಬಸವಿಗಳು, ಹೆಣ್ಣುಗಳೆಲ್ಲಾ ಹೆಣ್ಣು ಬಸವಿಗಳು ಅಂದರೆ, ಮಾದಿಗರಲ್ಲಿ ಗೃಹಸ್ಥ ಜೀವನವೇ ಇಲ್ಲವೆಂದು, ಮಾದಿಗರನ್ನು ಹೀಗಳೆಯುತ್ತಾರೆ ಈ ಮಾನ್ಯ ಸಂಶೋಧಕರು! ಈ ಖಂಡನೀಯ ಆಚರಣೆಯು ಬಸವಣ್ಣನವರ ಜೀವನಕ್ಕೆ ಯಾವ ರೀತಿಯಲ್ಲೂ ಸಂಬಂಧವಿಲ್ಲ ''[೧೬] ಎಂದು ಹೇಳಿದ್ದಾರೆ.

ಇಲ್ಲಿ 'ಬಸವ ' ಎಂಬುದು ಕೆಳ ಜಾತಿ ಜನರು ಇಡುವ ಹೆಸರು. ಇದನ್ನು ಒಬ್ಬ ಬ್ರಾಹ್ಮಣ ಅದರಲ್ಲೂ ಶ್ರೀಮಂತ ಕುಟುಂಬದಲ್ಲಿ ಇಂತಹ ಹೆಸರನ್ನಿಟ್ಟ ಮಾದಿರಾಜನಿಗೆ

ಅಗೌರವದ ನಾಮಕರಣವಾಗಿರಲಿಲ್ಲವೇ ? ಇದು ಒಂದು ಏಕವಚನದ ಗೌರವರಹಿತ ಹೆಸರು ಅಲ್ಲವೇ ? ಎಂಬುದು ಲೇಖಕರ ಇನ್ನೊಂದು ಹೇಳಿಕೆ. ಆ ಮೂಲಕ ಬಸವಣ್ಣನವರು ಹುಟ್ಟಿದ್ದು ಬ್ರಾಹ್ಮಣ ಜಾತಿಯಲ್ಲಿ ಅಲ್ಲ , ಮಾದಾರ ಚೆನ್ನಯ್ಯನನ್ನು ತನ್ನ ವಚನಗಳಲ್ಲಿ ಹೆಚ್ಚಾಗಿ ಪ್ರಸ್ತಾಪಿಸಿಕೊಂಡಿರುವುದನ್ನು ನೋಡಿದರೆ, ಮಾದಾರ ಚೆನ್ನಯ್ಯನ ಮಗನಿರಬೇಕು. ಮತ್ತು ಮಾದರಸನಿಗೆ 'ಉದರಸಂಜಾತ 'ವಲ್ಲ 'ಕರಸಂಜಾತ' ಮಗನಿರಬೇಕು. ಇದರಿಂದ ಬಸವಣ್ಣ ಮಾದಿಗನಿರಬಹುದು ಎಂಬುದು ತಿಳಿದುಬರುತ್ತದೆ ಎಂಬುದು ಜಯಪ್ರಕಾಶ್ ಅವರ ಪ್ರಮುಖವಾದ ಪ್ರಶ್ನೆ.

ಡಾ. ಬಿ. ರಾಜಶೇಖರಪ್ಪ ಅವರು ತಮ್ಮ ಒಂದು ಲೇಖನದಲ್ಲಿ ಬಂಜಗೆರೆ ಅವರು ಮಾಡಿರುವ ಈ ಮೇಲಿನ ಆಪಾದನೆಯನ್ನು ಖಂಡಿಸಿ 'ಬಸವಣ್ಣನವರ ಈ ಜಾತಿ ಮೂಲ ವಿಶ್ಲೇಷಣೆ ಕೇವಲ ಕಾಲ್ಪನಿಕ ವಾದ '. '' ಈ ಲೇಖನದಲ್ಲಿ ಬಸವ ಎಂಬ ಪದವನ್ನು ಪ್ರಾರಂಭದಲ್ಲಿ ಶ್ರೀಮಂತರು, ಶೈವ ಬ್ರಾಹ್ಮಣರು ಇಟ್ಟುಕೊಳ್ಳುತ್ತಿದ್ದರೆಂಬುದಕ್ಕೆ ೧೨ನೇ ಶತಮಾನದಿಂದ ೧೫ನೇ ಶತಮಾನದವರೆಗಿನ ಶಾಸನಗಳಲ್ಲಿ ಕಂಡುಬರುವ ಬಸವಣ್ಣ , ಬಸವ, ಬಸವರಸ, ಬಸವಣಭಟ್ಟ , ಬಸವಯ್ಯ ಎಂಬುದಾಗಿ ಉಲ್ಲೇಖವಾಗಿರುವ ಬ್ರಾಹ್ಮಣರ ಹೆಸರುಗಳನ್ನು (ಎಫಿಗ್ರಾಫಿಯಾ ಕರ್ನಾಟಕ ಸಂಪುಟ -೭, ಶಿಕಾರಿಪುರ ೧೧೭, ಕ್ರಿ.ಶ. ೧೧೧೮; ಎಫಿಗ್ರಾಫಿಯಾ ಇಂಡಿಕ ಸಂಪುಟ -೫, ಶಾಸನ ಸಂಖ್ಯೆ -೩, ಕ್ರಿ.ಶ. ೧೧೪೨ ; ಎಫಿಗ್ರಾಫಿಯಾ ಕರ್ನಾಟಕ ಸಂಪುಟ -೧೧, ದಾವಣಗೆರೆ -೨೩, ಕ್ರಿ.ಶ. ೧೪೧೦) ಇಲ್ಲಿ ನೋಡಬಹುದು '' ಎಂದು ತಿಳಿಸಿದ್ದಾರೆ. ಬಸವ, ಬಸವಯ್ಯ, ಬಸವಣ್ಣ , ಬಸವೇಶ್ವರ, ಸಂಗನಬಸವ....ಹೀಗೆ ಕರೆದಿರುವುದು ಅವರ ಬೆಳವಣಿಗೆಯನ್ನು ಎತ್ತಿತೋರಿಸುತ್ತದೆಯೇ ವಿನಃ ಅವರು ಕೆಳಜಾತಿಯಲ್ಲಿ ಜನಿಸಿದವರು ಎಂಬುದನ್ನಲ್ಲ. ಇಂದಿಗೂ ಸಹ ಎಷ್ಟೋ ಪ್ರಸಿದ್ಧ ವ್ಯಕ್ತಿಗಳನ್ನು ಏಕವಚನದಲ್ಲಿಯೇ ಸಂಬೋಧಿಸುತ್ತಿರುವುದನ್ನು ತಿಳಿಯಬಹುದಾಗಿದೆ.

**ಬಸವಣ್ಣ 'ಶಿವಸಂತಾನ' :**

ಲೇಖಕರು 'ಆನುದೇವಾ' ಪ್ರಬಂಧದಲ್ಲಿ ಬಸವಣ್ಣ 'ಶಿವಸಂತಾನ'ಕ್ಕೆ ಸೇರಿದವನು ಎಂಬುದಕ್ಕೆ ಕೊಡುವ ಹೇಳಿಕೆ ''ದಲಿತ ಜಾತಿಯಲ್ಲಿ ಹುಟ್ಟಿದ ಬಸವಣ್ಣ ಶಿವಸಂತಾನವಾದುದ್ದರಿಂದ ಬಾಲಯೋಗಿಯಾಗಿ ಕೂಡಲ ಸಂಗಮನಾಥನ ಸೇವೆಯಲ್ಲೇ ಬೆಳೆದು ಅದರಿಂದಾಗಿಯೇ ಸಂಗನ ಬಸವಣ್ಣ ಎಂದು ಕರೆಯಲ್ಪಡುತ್ತಿದ್ದ ಎಂಬ ಅಂಶವನ್ನು ಈ ವಿಶ್ಲೇಷಣೆಯಲ್ಲಿ ನಾನು (ಲೇಖಕರು) ನಿರೂಪಿಸಿದ್ದೇನೆ '' ಎಂದು 'ಲೇಖಕನ ಮಾತು'ಗಳಲ್ಲಿ ವಿವರಿಸಿದ್ದಾರೆ. ಹಾಗೆಯೇ ಇದೇ ಕೃತಿಯಲ್ಲಿ ಮುಂದೆ, (ಪುಟ ೭೩ ಮತ್ತು ೭೪ ರಲ್ಲಿ )'' ಮಠಗಳಲ್ಲಿದ್ದ ಬಸವಿಯರಿಗೆ ಸಂತಾನ

ಪ್ರಾಪ್ತಿಯಾಗುತ್ತಿದ್ದ ಪದ್ಧತಿಯ ಬಗ್ಗೆ ಇಂತಹ ಕಥೆಗಳು ಬೆಳಕು ಚೆಲ್ಲುತ್ತವೆ ಎಂದು ನಾವು ಸಾಕಾರಣವಾಗಿ ಯೋಚಿಸಬಹುದು. ಹಾಗೆ ಪ್ರಾಪ್ತವಾದ ಸಂತಾನ ಸಹಜವಾಗಿ ದೇವಸ್ಥಾನ, ಮಠ, ಇವುಗಳ 'ಚಾಕರಿ ' ಮಾಡುವ ಹೊಣೆ ಹೊರಬೇಕಾಗುತ್ತಿತ್ತು. ಶೈವಾಗಮಾಚಾರ್ಯರು ಸ್ತ್ರೀಪ್ರಧಾನ ಸಿದ್ಧಿಯಲ್ಲಿ ಕೆಳಜಾತಿಯ ಹೆಂಗಸರನ್ನು ಸಿದ್ಧಿಸಾಧನೆಗಾಗಿ ಬಳಸುತ್ತಿದ್ದರು ಎಂಬ ಉಲ್ಲೇಖ ಈ ಹಿಂದೆ ಮಾಡಲಾಗಿದೆ. ಅಂತಹ ಸಿದ್ಧಿಸಾಧನೆಯ ದೀಕ್ಷಾ ವ್ರತದಲ್ಲಿ ಸಂತಾನಪ್ರಾಪ್ತಿಯಾದರೆ ಅದು 'ಶಿವಸಂತಾನ' ವಾಗುತ್ತಿತ್ತು '' ಎಂದು ಉತ್ತರಿಸುತ್ತಾರೆ. ಆದರೆ, ಇವುಗಳಿಗೆ ಒಂದಕ್ಕೊಂದು ಸಂಬಂಧವಿಲ್ಲದಂತಿದೆ. ಹೇಗೆಂದರೆ, ಇದುವರೆಗೂ ಶಿವ ಸಂತಾನವೆಂದರೆ, ಸಾಮಾನ್ಯ ಅರ್ಥದಲ್ಲಿ 'ಶಿವನ ಕರುಣೆಯಿಂದ ಜನಿಸಿದ ಶಿಶು ' ಎಂದರ್ಥವಿದೆ. ಇದುವರೆಗೂ ಯಾವುದೇ ಶಾಸನದಲ್ಲಾಗಲೀ, ಸಾಹಿತ್ಯ ಕೃತಿಯಲ್ಲಾಗಲೀ ಶಿವಸಂತಾನವೆಂದರೆ ಮಾದಿಗ ಅಥವಾ ಕೆಳಜಾತಿಯ ಸ್ತ್ರೀಯೊಬ್ಬಳ ಅನೈತಿಕ ಸಂಬಂಧದಿಂದ ಜನಿಸಿದ ಶಿಶುವನ್ನು 'ಶಿವಸಂತಾನ'ವೆಂದು ಕರೆದಿರುವ ಪ್ರಕರಣಗಳು ಎಲ್ಲಿಯೂ ಕಂಡುಬರುವುದಿಲ್ಲ. ಹಾಗೆಯೇ ಇಂತಹ ಅನೇಕ ಅನೈತಿಕ ಆಗರಗಳ ಸಂಬಂಧದಿಂದ ಜನಿಸಿದ ಶಿಶುವನ್ನು ಯಾರೂ ದೇವಸ್ಥಾನ, ಮಠ ಮಾನ್ಯಗಳಲ್ಲಿ ದೇವರ ಸೇವೆಗೆ, ಸಿದ್ಧರ, ಯತಿಗಳ ಸೇವೆಗೆ ಅಂಕಿತರನ್ನಾಗಿ ಮಾಡುವ ಪದ್ಧತಿ ಇರಲಿಲ್ಲ. ಹಾಗೆಯೇ ಅಂತಹವರನ್ನು ತಮ್ಮ ಹತ್ತಿರಕ್ಕೂ ಕರೆದುಕೊಳ್ಳುತ್ತಿರಲಿಲ್ಲವೇನೋ ಎಂಬುದನ್ನು ಗಮನಿಸಬಹುದು. ಕೃತಿಕಾರರು ಹೇಳಿದಂತೆ ಭಾವಿಸುವುದಾದರೆ ಅಂತಹ ಒಬ್ಬ ಸಾಮಾನ್ಯ ವ್ಯಕ್ತಿ ರಾಜನ ಭಂಡಾರ ಆಸ್ಥಾನ ಅಧಿಕಾರಿಯಾಗುವುದಾದರೂ ಹೇಗೆ ? ಹೋಗಲಿ, ಆತನಿಗೆ ಹೆಣ್ಣು ಕೊಟ್ಟ ಸಿದ್ಧರಸ ಮತ್ತು ಬಲದೇವ ಮಂತ್ರಿವರ್ಯರು ಅನೈತಿಕ ಸಂಬಂಧದಿಂದ, ಮಾದಿಗ ಜನಾಂಗದ, ಕೆಳಜಾತಿಯ ಸ್ತ್ರೀಯೊಬ್ಬಳಿಗೆ ಜನಿಸಿದ ಈ ಶಿಶುವಿಗೆ ಹೆಣ್ಣು ಕೊಟ್ಟು ವಿವಾಹ ಮಾಡುತ್ತಿದ್ದರೆ? ಅದೂ ಅಲ್ಲದೆ ಎಲ್ಲರೂ ಭಾವಿಸಿರುವಂತೆ ೧೨ನೇ ಶತಮಾನದಲ್ಲಿ ನಡೆದ ಸಾಮಾಜಿಕ, ಧಾರ್ಮಿಕ ಕ್ರಾಂತಿಗೆ ಅಥವಾ ಕಲ್ಯಾಣ ಕ್ರಾಂತಿಗೆ ಮುಖ್ಯ ಕಾರಣಕರ್ತೃ ಬಸವಣ್ಣ. ಹಾಗೆಯೇ ಅದೇ ಮೊದಲ ಅಂತರ್ಜಾತಿಯ ವಿವಾಹವೆಂದು ಎಲ್ಲರೂ ತಿಳಿದಿರುವುದು. ಇಲ್ಲಿ ಲೇಖಕರ ಪ್ರಕಾರ ನಾವು ತಿಳಿದುಕೊಳ್ಳಬೇಕಾದ ಮಹತ್ವಪೂರ್ಣವಾದ ಅಂಶಗಳಲ್ಲಿ ಒಂದಾದ ಅಂತರ್ಜಾತಿಯ ವಿವಾಹ ಬಸವಣ್ಣನಿಂದ ಅಲ್ಲ , ಅದು ಬಿಜ್ಜಳನಿಂದ ಮತ್ತು ಬಲದೇವ ಮಂತ್ರಿವರ್ಯರಿಂದ. ಅದು ಮಾದಿಗ ಜನಾಂಗದ ಬಸವಣ್ಣನಿಗೂ ಮತ್ತು ಬ್ರಾಹ್ಮಣರಾದ ಬಲದೇವ ಮಂತ್ರಿಯ ಮಗಳಿಗೂ ಮತ್ತು ಬಿಜ್ಜಳನ ಸಾಕು ತಂಗಿ, ಸಿದ್ದರಸನ ಮಂತ್ರಿಯ ಮಗಳಿಗೂ ನಡೆದ ವಿವಾಹವೇ ಮೊದಲ ಅಂತರ್ಜಾತಿಯ ವಿವಾಹವೆಂದು ತಿಳಿಯಬೇಕಾಗುತ್ತದೆ. ಆಗ ಆಗುವ ಅಪಾರ್ಥಗಳಿಗೆ ಮತ್ತು ಕಲ್ಯಾಣದ ಕ್ರಾಂತಿಗೆ ಕಾರಣವಾದ ಅಂಶಗಳಿಗೂ ಏನೇನೂ

ಅರ್ಥವಿರುವುದಿಲ್ಲ. ಹೀಗೆ ಕಲ್ಯಾಣದಲ್ಲಿ ಕ್ರಾಂತಿಯೇ ನಡೆದಿಲ್ಲ ಎಂಬ ಅರ್ಥದವರೆಗೆ ಹೋಗಬೇಕಾಗುತ್ತದೆ. ಆದ್ದರಿಂದ ಜಯಪ್ರಕಾಶರ ಈ ಹೇಳಿಕೆಗಳನ್ನು ತಕ್ಷಣಕ್ಕೆ ಒಪ್ಪಿಕೊಳ್ಳಲೂ ಬರುವುದಿಲ್ಲ. ಇಂತಹ ಗಂಭೀರವಾದ ವಿಚಾರಗಳ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ.

**ಜಾತಿಯ ಅಪವರ್ಗೀಕರಣ :**

ಬಸವಣ್ಣನು ಅಸ್ಪೃಶ್ಯರ ಮನೆಗೆ ಹೋಗಿ ಅವರ ಮನೆಯಲ್ಲಿ ಪ್ರಸಾದ ತಿನ್ನುವುದರಿಂದ ಹಿಡಿದು ಅವರ ಸಂಗಡವೇ ಇದ್ದು ,ಅವರೊಂದಿಗೇನೇ ಚರ್ಚೆಗಳಲ್ಲಿ ಭಾಗವಹಿಸಿ ಅಂತರ್ಜಾತಿಯ ವಿವಾಹವನ್ನು ಮಾಡಿಸುವುದರ ಮೂಲಕ ತನಗೆ ಅಂಟಿದ್ದ ಬ್ರಾಹ್ಮಣ ಜಾತಿಯನ್ನು ಅಪವರ್ಗೀಕರಣ ಮಾಡಿಕೊಂಡಿದ್ದಾನೆ. ಗಾಂಧೀಜಿಯವರು ಒಂದು ಕಡೆ '' ನನಗೆ ಮುಂದಿನ ಜನ್ಮ ಸಿಗುವುದಾದರೆ ನಾನು ಅಸ್ಪೃಶ್ಯನಾಗಿ ಹುಟ್ಟಲು ಬಯಸುತ್ತೇನೆ '' ಎಂದು ಹೇಳಿ, ಅಸ್ಪೃಶ್ಯತೆಯ ನಿವಾರಣೆಯ ಬಗ್ಗೆ ತಮ್ಮ ಕಳಕಳಿಯನ್ನು ತೋರಿಸಿದ್ದಾರೆ. ಹಾಗೆಯೇ ದಲಿತರು, ಅಸ್ಪೃಶ್ಯರು, ಹರಿಜನರೆಂದೂ ಹೇಳಿದ್ದಾರೆ. ಇವರ ಪ್ರಕಾರ ದಲಿತರೆಂದರೆ ಹರಿಯ ಮಕ್ಕಳು. ಆದರೆ, ಗಾಂಧೀಜಿಯವರಂತೆ ಬಸವಣ್ಣನವರು ಪುನರ್ಜನ್ಮ, ಸ್ವರ್ಗ, ನರಕಗಳಲ್ಲಿ ನಂಬಿಕೆ ಇಟ್ಟಿರಲಿಲ್ಲ ಮತ್ತು ಬಸವಣ್ಣನವರಿಗೆ ಗಾಂಧೀಜಿ ಅವರಂತೆ ಮುಂದಿನ ಜನ್ಮದವರೆಗೂ ಕಾಯುವಷ್ಟು ತಾಳ್ಮೆ ಇರಲಿಲ್ಲವೇನೋ. ಕನಕದಾಸರು ಹೇಳುವಂತೆ ''ಮಾನವ ಜನ್ಮ ಒಂದೇ ಸಾರಿ, ಅದನ್ನು ಹಾಳು ಮಾಡಿಕೊಳ್ಳಬೇಡಿ ಹುಚ್ಚಪ್ಪಗಳಿರಾ'' ಎಂಬ ಕೀರ್ತನೆಯಂತೆ ಬಸವಣ್ಣ ಇದೇ ಜನ್ಮದಲ್ಲಿ ತಮ್ಮನ್ನು ತಾವೇ ಅಪವರ್ಗೀಕರಿಸಿಕೊಂಡಿದ್ದಾರೆ. ಹಲವಾರು ವಚನಗಳಲ್ಲಿ ಕೆಳಜಾತಿಯ ಶಿವಶರಣರನ್ನು ನನ್ನ ತಂದೆ, ತಾಯಿ, ಬಂಧು -ಬಳಗ ಎಂದೆಲ್ಲಾ ಕರೆದುಕೊಂಡು ಅವರೊಂದಿಗೆ ಒಂದಾಗಿ ಸಹಬಾಳ್ವೆ ನಡೆಸುವಲ್ಲಿ ಮುಂದಾಗಿದ್ದರು ಎಂಬುದನ್ನು ಅವರ ವಚನಗಳಿಂದಲೇ ತಿಳಿಯಬಹುದು.

**ವಂಶಾವಳಿಯ ಚಿತ್ರಣ :**

ಡಾ.ಬಂಜಗೆರೆ ಅವರು ೧೨೬೦ರ 'ಅರ್ಜುನವಾಡ' ಶಾಸನವನ್ನು ಆಧಾರವಾಗಿಟ್ಟು ಕೊಂಡು ಅದನ್ನು ಅಧ್ಯಯನ ಮಾಡಿ ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸಿದ್ದಾರೆ. ಅದರಂತೆ ಎಂ.ಎಂ.ಕಲ್ಬುರ್ಗಿ, ಎಂ.ಚಿದಾನಂದಮೂರ್ತಿ ಅವರು ಅರ್ಥೈಸಿಕೊಂಡು ನೀಡಿರುವ ಹೇಳಿಕೆಗಳನ್ನು ಮಾತ್ರ ಆಧಾರವಾಗಿಟ್ಟುಕೊಂಡು ''ಬಸವಣ್ಣ ಮಾದಿರಾಜನಿಗೆ 'ಉದರಸಂಜಾತ'ನಲ್ಲ, 'ಕರಸಂಜಾತ' ನಿರಬೇಕು'' ಎಂದು (ಪುಟ ೬೪,೬೫ ರಲ್ಲಿ)

ಹೇಳಿದ್ದಾರೆ. ಅಷ್ಟೇ ಅಲ್ಲದೆ ಮಾದಿರಾಜನು ಕೃಷ್ಣಂಭಟನಂತೆ ವಾಮಾಚಾರಿ ತಾಂತ್ರಿಕನಾಗಿದ್ದು "ತನ್ನ ಸ್ತ್ರೀಪ್ರಧಾನ ಸಾಧನೆಗಾಗಿ ಡೊಂಬಿನಿ, ಮಾತಾಂಗಿನಿ, ರಜಕಿನಿಯರಂಥ (ಕೆಳ ಜಾತಿಗಳ) ಸ್ತ್ರೀಯರನ್ನು ಉಪಯೋಗಿಸಿಕೊಂಡು ಬಸವಣ್ಣನನ್ನು 'ಕರಸಂಜಾತ'ನನ್ನಾಗಿ ಪಡೆದನು" ಎಂದು ಲೇಖಕರು ಹೇಳಿರುವುದನ್ನು ಗುರುತಿಸಬಹುದು. ಒಟ್ಟಿನಲ್ಲಿ ಲೇಖಕರು ಬಸವಣ್ಣನೊಬ್ಬನನ್ನೇ ಇಲ್ಲಿ ಅಧ್ಯಯನ ಮಾಡದೆ ಇಡೀ ಅವರ ಸಮಸ್ತ ಕುಟುಂಬವನ್ನೇ 'ಅನೈತಿಕ ಆಚರಣೆಗಳ ಸಂತಾನ ' ಎಂಬುದಾಗಿ ಈ ಪ್ರಬಂಧದಲ್ಲಿ ಕರೆದಿರುವುದನ್ನು ಗುರುತಿಸಬಹುದು.

ಬಸವಣ್ಣನ ಜೀವನಕ್ಕೆ ಸಂಬಂಧಪಟ್ಟಂತೆ ಇಂದಿಗೂ ಪ್ರಚಲಿತದಲ್ಲಿರುವ ಒಂದು ಐತಿಹಾಸಿಕ ವಿಚಾರವನ್ನು ಡಾ. ಹೆಚ್.ಚಂದ್ರಶೇಖರ್ ಅವರು ಬೆಳಕಿಗೆ ತಂದಿದ್ದಾರೆ.

> "ಡಾ. ಸಿದ್ದಯ್ಯ ಪುರಾಣಿಕರು ಮಾದಲಾಂಬಿಕೆಯ ತವರುಮನೆಯ ವಂಶಾವಳಿಯ ಚಿತ್ರವನ್ನು ಪ್ರಕಟಿಸಿದ್ದಾರೆ. ಇದು ಇಂಗಳೇಶ್ವರದ ಕುಲಕರ್ಣಿ ಮನೆತನದ ವಂಶಾವಳಿಯ ಚಿತ್ರ. ಈ ಮನೆತನದವರು ಇಂದಿಗೂ ಇಂಗಳೇಶ್ವರದಲ್ಲಿ ವಾಸವಾಗಿರುವ ಸ್ಮಾರ್ತ ಬ್ರಾಹ್ಮಣರು. ಇವರು ಸ್ಮಾರ್ತ ಸಂಪ್ರದಾಯಕ್ಕೆ ಸೇರಿದ (ಅಂದರೆ ಶೈವ ಬ್ರಾಹ್ಮಣ) ಕಣ್ವ , ಕೌಡಿಣ್ಯ ಗೋತ್ರದವರು. ಈ ವಂಶಾವಳಿಯಲ್ಲಿ ಮಾದಲಾಂಬಿಕೆಯನ್ನು ಬಾಗೇವಾಡಿಯ ಕಶ್ಯಪಗೋತ್ರದ ಮಾದರಸನಿಗೆ ಮದುವೆ ಮಾಡಿಕೊಡಲಾಗಿತ್ತು ಎಂದು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಈ ಸ್ವಯಂ ಘೋಷಿತ ಸಂಶೋಧಕರಿಗೆ ಈ ದಾಖಲೆಯೇ ಗೊತ್ತಿಲ್ಲ ! ಇಂಗಳೇಶ್ವರದಲ್ಲಿ ಮತ್ತು ಬಾಗೇವಾಡಿಯಲ್ಲಿ ಮಾದಲಾಂಬಿಕೆ ಮತ್ತು ಮಾದರಸರ ವಂಶಜರು ಇನ್ನೂ ಇದ್ದಾರೆ. ಏನೋ ಹೊಸದನ್ನು ಹೇಳಿ, ರಾಡಿಯನ್ನು ಎರಚಾಡಿ ಹೆಸರು ಮತ್ತು ಹಣವನ್ನು ಗಳಿಸುವ ಉದ್ದೇಶಗಳಿಂದ ಪ್ರೇರಿತರಾಗಿರುವ ಬಂಜಗೆರೆ ಜಯಪ್ರಕಾಶ್ ಅವರಿಗೆ ಅಧ್ಯಯನ ಮತ್ತು ಕ್ಷೇತ್ರ ಕಾರ್ಯಗಳು ಅವಶ್ಯಕವೆಂದೆನಿಸಿಲ್ಲ !!"[೧೭]

ಎಂದು ಡಾ. ಹೆಚ್.ಚಂದ್ರಶೇಖರ್ ಅವರು ತಮ್ಮ ಒಂದು ಲೇಖನದಲ್ಲಿ ವಿವರಿಸಿರುವುದನ್ನು ನೋಡಬಹುದು. ಹೀಗೆ ಒಬ್ಬೊಬ್ಬ ಸಂಶೋಧಕರು ಒಂದೊಂದು ರೀತಿಯಲ್ಲಿ ಬಸವಣ್ಣನ ವಂಶವೃಕ್ಷವನ್ನು ನೀಡಿದ್ದಾರೆ. ಇವುಗಳಿಗೆಲ್ಲಾ ಮೂಲ ಆಧಾರ ೧೨೬೦ರ ಅರ್ಜುನವಾಡ ಶಾಸನ ಎಂದು ಹೇಳಬಹುದು. "ಪ್ರೊ. ಚಿದಾನಂದಮೂರ್ತಿ ಅವರು ಕ್ಷೇತ್ರಕಾರ್ಯ ಮಾಡಿ ಸಂಗ್ರಹಿಸಿರುವ ಮಾಹಿತಿಯ ಪ್ರಕಾರ ಮೊದಲ ಹೆಂಡತಿ ಚೆನ್ನಮ್ಮ , ಚೆನ್ನಮ್ಮ ತೀರಿಹೋದ ನಂತರ ಬಸವಣ್ಣನ ತಾಯಿ ಮಾದಾಂಬೆಯನ್ನು ಮಾದಿರಾಜ ಮದುವೆಯಾಗಿದ್ದ ಎಂದಿದೆ. ಮೊದಲ ಹೆಂಡತಿ ಚೆನ್ನಮ್ಮನಿಗೆ ಸಂತಾನ ಇರಲಿಲ್ಲವೇ ? ಅವರು ನಾಗಾಯಿಗೆ ತವರಿನಾಶ್ರಯ ಕಲ್ಪಿಸಬಹುದಾಗಿತ್ತಲ್ಲವೇ ? " (ಪುಟ-೪೧ರಲ್ಲಿ ) ಲೇಖಕರು ಹೇಳುವ ಈ ಮಾತುಗಳಲ್ಲಿ

ಗೊಂದಲವಿರುವುದನ್ನು ನೋಡಬಹುದು. ಉದಾ: ಮೊದಲ ಹೆಂಡತಿ ಚೆನ್ನಮ್ಮ ತೀರಿಹೋದ ಬಳಿಕ ಮಾದಾಂಬೆಯನ್ನು ಮದುವೆಯಾದ ಮೇಲೆ ನಾಗಾಯಿಗೆ ಚೆನ್ನಮ್ಮನು ತವರಿನಾಶ್ರಯ ನೀಡುವುದಾದರೂ ಹೇಗೆ ? ಬಸವಣ್ಣ ಹಾಗೂ ಅವನ ಅಕ್ಕ ನಾಗಾಯಿ ತನ್ನ ತಾಯಿಯ ತಾಯಿ ಅಂದರೆ ಅಜ್ಜಿಯ ಮನೆಯಲ್ಲಿ ಬೆಳೆದರು ಎಂದು ಲೇಖಕರೇ ಹೇಳಿದ್ದಾರೆ. ಅದೇ ರೀತಿ ಬಸವಣ್ಣನಿಗೆ ದೇವರಾಜನೆಂಬ ಅಣ್ಣನಿದ್ದುದಾಗಿ ಅರ್ಜುನವಾಡ ಶಾಸನದಿಂದ ವಿದ್ವಾಂಸರು ತರ್ಕಿಸಿದ್ದಾರೆ ಎಂದೂ ಹೇಳಿದ್ದಾರೆ. ಇಲ್ಲಿ ದೇವರಾಜನೆಂಬ ಅಣ್ಣನು ಮಾದಿರಾಜ ಮತ್ತು ಚೆನ್ನಮ್ಮನ ಉದರಸಂಜಾತನಿರಬೇಕು. ಬಸವಣ್ಣನ ದೊಡ್ಡಮ್ಮನ ಮಗನಿರಬೇಕು ಎಂಬುದನ್ನು ತಿಳಿಯಲು ಸಾಧ್ಯವಿದೆ. ಬಸವಣ್ಣನು ಮತ್ತು ಅವನ ಅಕ್ಕ ನಾಗವ್ಮ ಬಾಲ್ಯದಲ್ಲಿದ್ದಾಗ ಅವನ ತಂದೆ, ಮಾದಾಂಬೆಯ ಊರಾದ ಇಂಗಳೇಶ್ವರದ ಬಾಗೇವಾಡಿಯಲ್ಲಿ ಬಂದು ನೆಲೆಸಿರಬಹುದು. ಹಾಗೆಯೇ ಚೆನ್ನಮ್ಮನ ತೌರಿನಲ್ಲಿ ಚೆನ್ನಮ್ಮನಿಗೆ ದೇವರಾಜನೆಂಬ ಮಗ ಜನಿಸಿ ಆತನು ಅಲ್ಲೇ ಆತನ ಅಜ್ಜಿಯ ಮನೆಯಲ್ಲಿ ಬೆಳೆದಿರಬೇಕು ಎಂಬುದನ್ನು ತಿಳಿಯಲು ಅವಕಾಶವಿದೆ.

" ಸಂಗನ ಬಸವನ ಅಗ್ರ(ಜ)
(ಲಿಂ)ಗೈಕಂ ದೇವರಾಜ ಮುನಿಪನ ತನಯಂ
ಜಂಗಮ ಪರುಸಂ (ಕಾವ)ರ
ಸಂಗಂ ಪ್ರಿಯಸುತನೆನಿಪ್ಪ ಕಲಿದೇವರಸಂ "

–ಅರ್ಜುನವಾಡ ಶಾಸನದ ಕಂದ ಪದ್ಯ

ಈ ಕಂದ ಪದ್ಯದ ಎಲ್ಲಾ ಸಂಗತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಎಂ.ಎಂ. ಕಲಬುರ್ಗಿಯವರು ಬಸವಣ್ಣನವರ ವಂಶಾವಳಿಯ ರೇಖಾಚಿತ್ರವನ್ನು ಮಾರ್ಪಡಿಸಿ ಈ ರೀತಿ ನೀಡಿದ್ದಾರೆ.




ಈ ಮೇಲಿನ ಕಂದಪದ್ಯ ಮತ್ತು ರೇಖಾಚಿತ್ರವನ್ನು ಅರ್ಥೈಸುವ ಬಗೆಯನ್ನು ಒಬ್ಬೊಬ್ಬ ವಿದ್ವಾಂಸರು ಒಂದೊಂದು ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅವರಲ್ಲಿ

ಮುಖ್ಯವಾಗಿ ಎಂ.ಚಿದಾನಂದಮೂರ್ತಿ ಹಾಗೂ ಎಂ.ಎಂ.ಕಲಬುರ್ಗಿ ಅವರು ಈ ರೀತಿ ವಿವರಿಸಿರುವುದನ್ನು ನೋಡಬಹುದು.

''ಜಂಗಮು ಪರುಸಂ ಕಾವರಸಂಗಮು ಪ್ರಿಯಸುತನೆನಪ ಕಲಿದೇವರಸಂ ಎಂಬಲ್ಲಿ ತನಯಂ ಎಂಬ ಪದಕ್ಕೆ ನೇರವಾದ ಶಿಷ್ಯನೆಂದು ಅರ್ಥೈಸಬೇಕು ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ಕಂದ ಪದ್ಯವನ್ನು ಸಂಗನ ಬಸವನ ಅಣ್ಣನಾದ ಲಿಂಗೈಕ್ಯ ದೇವರಾಜನ ಮಗನು, ಜಂಗಮು ಪರುಷನಾದ ಕಾವರಸನಿಗೂ ಶಿಷ್ಯನೆಂಬ ಅರ್ಥದಲ್ಲಿ ಪ್ರೀತಿಯ ಮಗನು ಎನಿಸಿದ ವಿಷಯ ವ್ಯಕ್ತವಾಗುತ್ತದೆ. ಇದರಿಂದಾಗಿ ಕಲಿದೇವರಸನು ದೇವರಾಜನಿಗೆ ಉದರಸಂಜಾತನೂ, ಕಾವರಸನಿಗೆ ಕರಸಂಜಾತನೂ ಆಗಿರುವನೆಂಬ ಅರ್ಥ ಧ್ವನಿಸುತ್ತದೆ ''[೧೮]

ಎಂದು ಹೇಳಿದ್ದಾರೆ. ಅದೇ ರೀತಿ ಅರ್ಜುನವಾಡದ ಶಿಲಾಶಾಸನವು ಸಹ ಈ ಮಾತುಗಳನ್ನು ಸಮರ್ಥಿಸುತ್ತದೆ. ಹಾಗೆಯೇ ಅರ್ಜುನವಾಡ ಶಾಸನವನ್ನು ಮತ್ತೊಬ್ಬ ಲೇಖಕರು ಇನ್ನೊಂದು ರೀತಿ ಅರ್ಥೈಸಿರುವುದನ್ನು ನೋಡಬಹುದು.

''೧. ಶ್ರೀ ಶ್ರೀ ಬಸವೇಶ್ವರನ ತಂದೆ ಮಾದಿರಾಜ, ಅವರ ತಂದೆ ಲಿಂಗ ಭಟ್ಟ, ಇವರು ಬಾಗೇವಾಡಿಯ ಗ್ರಾಮಣೀ ಮಣಿಗಳು, ಅಂದರೆ ಶಾನುಭೋಗರು ಅಥವಾ ಕುಲಕರ್ಣಿಗಳಾಗಿದ್ದರು. ಇವರು ಶೈವಬ್ರಾಹ್ಮಣರೆಂದೂ, ಕಮ್ಮೆ ಕುಲದವರೆಂದೂ, ಕಾಶ್ಯಪ ಗೋತ್ರದ ಸಾಂಖ್ಯಾಯನ ಪ್ರವರದವರೆಂದೂ ಗ್ರಂಥಗಳು ಹೇಳುತ್ತವೆ. ಬಸವಣ್ಣನವರು ಆರಾಧ್ಯ ಬ್ರಾಹ್ಮಣರಾಗಿ ಹುಟ್ಟಿದರು ಎಂಬುದಕ್ಕೆ ತಕ್ಕ ಆಧಾರಗಳಿಲ್ಲವೆಂದು ತೋರುತ್ತದೆ.

೨. ಬಸವೇಶ್ವರನಿಗೆ 'ಬಾಳಸಂಗಯ್ಯ' ಎಂಬ ಒಬ್ಬ ಮಗನಿದ್ದನೆಂದು ತಿಳಿದು ಬಂದಿದೆ ಎಂದು ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರವು ಹೇಳುತ್ತದೆ.

೩. ಅರ್ಜುನವಾಡ ಶಿಲಾಶಾಸನವು ಈ ಮಾತನ್ನು ಸಮರ್ಥಿಸುತ್ತದೆ. ಈ ಶಾಸನವು ಕ್ರಿ.ಶ. ೧೨೬೦ ರಲ್ಲಿ ಲಿಖಿತವಾಗಿದೆ. ಅಂದರೆ ಬಸವಣ್ಣನಿಗೆ ೧೦೦ ವರ್ಷಗಳ ಅಂತರದಲ್ಲಿ ಇದು ಬರೆಯಲ್ಪಟ್ಟಿದೆ. ಬಸವಣ್ಣನ ಮೊಮ್ಮಗ ದೇವರಾಜ ಮುನಿಪ, ಅವನ ವಂಶೀಯ ಕಲಿದೇವ, ಅವನ ಮಗ ಹಾಲಬಸವಿದೇವ ಎಂಬ ಹೆಸರುಗಳು ತಿಳಿದುಬಂದಿದೆ. ಈ ಶಾಸನದ ಕೆಲವು ಭಾಗಗಳು ಜೀರ್ಣವಾಗಿರುವುದರಿಂದ ಅಲ್ಲಿ ಬಸವೇಶ್ವರನ ಮಗನ ಹೆಸರು ತಿಳಿದುಬಂದಿಲ್ಲ, ಆದ್ದರಿಂದ ಬಸವೇಶ್ವರನಿಗೆ ಬಾಲಸಂಗಯ್ಯ ಎಂಬ ಮಗನಲ್ಲದೆ ಇತರ ಮಕ್ಕಳೂ ಇದ್ದಿರಬಹುದೆಂದು ಬಸವನ ಪ್ರಭಾವದ ದೆಸೆಯಿಂದ ಅವನ ಮಕ್ಕಳು ಮುಂದೆ ರಾಜರ ಮನ್ನಣೆಗೆ

ಪಾತ್ರರಾಗಿರಬಹುದು ಎಂದೂ ನಾವು ತರ್ಕಿಸಬಹುದು "[೨೯]

ಎಂದು ಕೃತಿಯೊಂದರಿಂದ ತಿಳಿದುಬರುತ್ತದೆ. ಇದನ್ನು ನಾವು ಈ ರೀತಿ ರೇಖಾಚಿತ್ರದಲ್ಲಿ ಇವರ ವಂಶವೃಕ್ಷವನ್ನು ಚಿತ್ರಿಸಬಹುದು.

ರೇಖಾಚಿತ್ರ

ಲಿಂಗಭಟ್ಟ
|
ಮಾದಿರಾಜ
|
ಬಸವಣ್ಣ
|
ಬಾಲಸಂಗ (ಯ್ಯ)
|
ದೇವರಾಜ ಮುನಿಪ
|
ಕಲಿದೇವ
|
ಹಾಲಬಸವಿದೇವ

ಈ ಮೇಲಿನ ಮೊದಲ ಹೇಳಿಕೆಯಲ್ಲಿ ಬಸವಣ್ಣನವರು ಆರಾಧ್ಯ ಬ್ರಾಹ್ಮಣರಲ್ಲ ಎಂಬುದು ಆಧಾರಗಳಿಂದ ತಿಳಿದುಬರುತ್ತದೆ ಎಂದು ಸ್ವತಃ ವಿದ್ವಾಂಸರೇ ಇಲ್ಲಿ ಒಪ್ಪಿಕೊಂಡಿದ್ದಾರೆ. ಹಾಗೆಯೇ ಬಸವಣ್ಣನು ಶಾನುಭೋಗ ಅಥವಾ ಕುಲಕರ್ಣಿ ಎಂದೂ ತಿಳಿಯಬೇಕೆಂದು ತಿಳಿಸಿದ್ದಾರೆ. ಈ ಹೇಳಿಕೆಯನ್ನು ಅಂದಿನ ಸಮಾಜದವರು ಒಪ್ಪಿಕೊಂಡಿರುವುದನ್ನು ನೋಡಬಹುದು. ಇಲ್ಲಿ ಈ ಹೇಳಿಕೆ ಯಾವ ಗಲಭೆಯನ್ನೂ ಎಬ್ಬಿಸಿಲ್ಲ. ಆದರೆ ಬಂಜಗೆರೆ ಜಯಪ್ರಕಾಶ್ ಅವರ ಈ ವಾದವನ್ನು ಎಲ್ಲರೂ ಸರ್ವಾನುಮತದಿಂದ ವಿರೋಧಿಸಿದ್ದಾರೆ. ಇಲ್ಲಿ ಲೇಖಕರು ಬಸವಣ್ಣ ಬ್ರಾಹ್ಮಣನಲ್ಲ , ಮಾದಿಗನೆಂದು ನೇರವಾಗಿ ಪ್ರಸ್ತಾಪಿಸಿದ್ದಿದ್ದರೆ, ಎಲ್ಲರೂ ಸಂತೋಷವಾಗಿಯೇ ಒಪ್ಪಿಕೊಳ್ಳುತ್ತಿದ್ದವು ಎಂದು ಎಲ್ಲಾ ಬಸವ ಅನುಯಾಯಿಗಳು ಲೇಖನಗಳಲ್ಲಿ ವಿವರಿಸಿದ್ದಾರೆ. ಆದರೆ, ಇವರು ಬಸವಣ್ಣನನ್ನು ಮಾತ್ರವಲ್ಲದೆ, ಆತನ ಇಡೀ ಕುಟುಂಬವನ್ನು ಅನೈತಿಕ ಆಗರಗಳ ಸಂತಾನವೆಂದು ಕರೆದಿರುವುದನ್ನು ಎಲ್ಲಾ ಪ್ರಗತಿಪರ ಚಿಂತಕರು, ಲೇಖಕರು,

ಬರಹಗಾರರು ವಿರೋಧಿಸಿರುವುದನ್ನು ನೋಡಬಹುದು.

ಒಟ್ಟಾರೆಯಾಗಿ ಈ ಮೇಲ್ಕಂಡಂತೆ ಎತ್ತಲಾಗಿರುವ ಪ್ರಶ್ನೆಗಳಲ್ಲದೆ ಲೇಖಕರು ಇನ್ನೂ ಹಲವಾರು ಪ್ರಶ್ನೆಗಳನ್ನು ಹೊಸದಾಗಿ ಪರಿಚಯಿಸಿದ್ದಾರೆ. ಅವುಗಳನ್ನೆಲ್ಲಾ ಅಧ್ಯಯನ ಮಾಡಲು ಇಲ್ಲಿ ಕಾಲ ಮತ್ತು ಮಿತಿ ಇರುವುದರಿಂದ ಅವುಗಳನ್ನು ಪ್ರಾಸಂಗಿಕವಾಗಿ ಪ್ರಸ್ತಾಪಿಸಿದ್ದೇನೆ. ಬಸವಣ್ಣನ ಹಾಗೂ ಅವನ ಕುಟುಂಬದ ಜಾತಿ ಮೂಲ ವಿಶ್ಲೇಷಣೆ ಮಾಡುತ್ತಾ ಇವರ ಇಡೀ ಕುಟುಂಬವೇ ಅನೈತಿಕ ಆಗರಗಳ ಸಂತಾನವೆಂದು ಹೇಳಿರುವುದಷ್ಟೇ ಅಲ್ಲದೆ, ಅಂಬೇಡ್ಕರ್, ಕುವೆಂಪುರವರ ಜನನ ಹಿಂದಿನ ವೃತ್ತಾಂತವನ್ನು ಯಾರೋ ತಿಳಿಗೇಡಿಗಳು ಏನೇನೋ ಮಾತಾಡಿಕೊಳ್ಳುತ್ತಿದ್ದರು ಎಂದೂ ಹೇಳುತ್ತಾರೆ. ಬಸವಣ್ಣ ಮಾದಿಗನೆಂಬುದಕ್ಕೆ, ಆತನು ಮಾದಿರಾಜನ ಕರಸಂಜಾತ ಪುತ್ರನಿರಬೇಕು ಎಂಬುದನ್ನು ಸಮರ್ಥಿಸಲು ಮರುಳಸಿದ್ದೇಶ್ವರರ, ಶ್ರೀ ಮಲೆಯ ಮಾದೇಶ್ವರರ, ಕೋಲಳ್ಳಿ ಗೋಣಿ ಬಸವೇಶ್ವರರ, ಜಾತಿವೇದ ಮುನಿಗಳ ಹಾಗೂ ಏಳು ಕೊಳ್ಳದ ಯಲ್ಲಮ್ಮನ ಕಥೆಗಳನ್ನು ತಪ್ಪಾಗಿ ಇಲ್ಲಿ ವಿಶ್ಲೇಷಿಸಿರುವುದನ್ನು ನೋಡಬಹುದು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಒಟ್ಟಾರೆಯಾಗಿ ಬಂಜಗೆರೆ ಅವರ ಈ ಜಾತಿ ಮೂಲ ವಿಶ್ಲೇಷಣೆ ಪ್ರಬಂಧ ತಕ್ಷಣಕ್ಕೆ ಸತ್ಯಕ್ಕೆ ದೂರವೆಂದೇ ಹೇಳಬೇಕಾಗುತ್ತದೆ. ಈ ಬಗ್ಗೆ ಇನ್ನೂ ಸಾಕಷ್ಟು ಅಧ್ಯಯನ, ಸಂಶೋಧನೆ ಮತ್ತು ಕಾರ್ಯಕ್ಷೇತ್ರ ನಡೆಯಬೇಕಾಗಿದೆ. ''ಲೇಖಕರು ಇನ್ನೂ ಕೂಲಂಕುಶವಾಗಿ ಅಧ್ಯಯನ ಮಾಡಿ ಮಾಹಿತಿಗಳನ್ನು ಕಲೆಹಾಕಿಕೊಂಡು ದಾಖಲೆಗಳನ್ನು ಒದಗಿಸಿದ್ದರೆ ಈ ವಿಚಾರವನ್ನು ಒಪ್ಪಬಹುದಾಗಿತ್ತು ಎನಿಸುತ್ತದೆ. ಆದರೆ, ಇವರು ಇನ್ನೂ ಅಧ್ಯಯನದಲ್ಲಿರುವಾಗಲೇ ಈ ರೀತಿ ಹೇಳಿ ದ್ವಂದ್ವತೆಗೆ ಕಾರಣವಾಗಿರುವುದು ದುರಂತವೆಂದೇ ಹೇಳಬಹುದು '' ಎಂದು ವಿಮರ್ಶಕರೊಬ್ಬರು 'ಎನ್ನ ತಂದೆ ಕೂಡಲಸಂಗಮದೇವಾ...' ವಿಮರ್ಶಾ ಲೇಖನ ಕೃತಿಯಲ್ಲಿ ತಿಳಿಸಿದ್ದಾರೆ. ಪ್ರಸ್ತುತ ಸಮಾಜಕ್ಕೆ ಬಸವಣ್ಣನ ಜಾತಿ, ತಂದೆ, ತಾಯಿ ಮುಖ್ಯವಲ್ಲ. ತನ್ನನ್ನು ತಾನು ಅರಿಯಬೇಕು. ಈ ಮಾತನ್ನು ಶರಣರು ಪದೇ ಪದೇ ವಚನಗಳಲ್ಲಿ ಹೇಳಿದ್ದಾರೆ. ಹಾಗೆ ತನ್ನ ತಾನರಿತವನಿಗೆ ಕುಲವೊಂದೆ, ಅದು ಭಕ್ತುಕುಲ. ಪರರಿಗೆ ತೊಂದರೆ ಕೊಡಬಾರದು ಎಂದು ತಿಳಿಸಿದ್ದಾರೆ. ಪ್ರಸ್ತುತ ಸಮಕಾಲೀನ ಸಮಾಜಕ್ಕೆ ಬಸವಣ್ಣನ ತತ್ವಗಳು ಮತ್ತು ಸಾಮಾಜಿಕ, ಧಾರ್ಮಿಕ ನೀತಿ ನಿಯಮಗಳು ಅವಶ್ಯಕವಾಗಿವೆ. ಆದ್ದರಿಂದ ಬಸವಣ್ಣನ ಬಗ್ಗೆ ಸಮಾಜದಲ್ಲಿ ಒಳ್ಳೆಯ ಅಭಿಪ್ರಾಯ ಮೂಡಿಸುವ ಕಾರ್ಯಗಳು ಕೈಗೊಳ್ಳಬೇಕಿದೆ. ಈ ಹಿನ್ನೆಲೆಯಲ್ಲಿ ಇಂತಹ ಕೃತಿಗಳು ಮುಂದಿನ ಸಂಶೋಧಕರಿಗೆ ಮಾದರಿಯಾಗುತ್ತವೆ ಎಂದು ಹೇಳಬಹುದು.

## ಅಡಿ ಟಿಪ್ಪಣಿಗಳು :

೧. ಡಾ. ಸಿ.ನಾಗಭೂಷಣ ; ಶಾಸನಗಳಲ್ಲಿ ಬಸವಣ್ಣನವರ ಕಾಲ ಮತ್ತು ಇತಿವೃತ್ತ : ಸಮೀಕ್ಷೆ, ಕೃತಿ - ಎನ್ನ ತಂದೆ ಕೂಡಲ ಸಂಗಮದೇವಾ... ಬಸವಪಥ ಜುಲೈ ೨೦೦೭ರ ವಿಶೇಷ ಸಂಚಿಕೆ, ಬಸವ ಸಮಿತಿ, ಬೆಂಗಳೂರು, ಪುಟ-೨೬.

೨. ಪ್ರೊ. ಬಿ.ವಿರೂಪಾಕ್ಷಪ್ಪ , ಡಾ. ಎ.ಎಸ್.ವಿದ್ಯಾಶಂಕರ್, ಟಿ.ಆರ್.ಮಹಾದೇವಯ್ಯ (ಸಂ ) ವಿಶ್ವಜ್ಯೋತಿ ಬಸವಣ್ಣ ; ಬಸವಸಮಿತಿ, ಬೆಂಗಳೂರು, ೨೦೦೭, ಪುಟ -೬.

೩. ಶ್ರೀ ಜಿ.ವಿ.ಶಾಸ್ತ್ರಿ (ಸಂ.) ; ಬಸವಣ್ಣನವರ ವಚನಗಳು, ಪಾರುಪ್ರಕಾಶನ, ಗದಗ, ೫ನೇ ಮುದ್ರಣ ಪುಟ -೪.

೪. ಡಾ. ಸಿ.ನಾಗಭೂಷಣ ; ಲೇ. ಶಾಸನಗಳಲ್ಲಿ ಬಸವಣ್ಣನವರ ಕಾಲ ಮತ್ತು ಇತಿವೃತ್ತ : ಸಮೀಕ್ಷೆ, ಕೃತಿ - ಎನ್ನ ತಂದೆ ಕೂಡಲ ಸಂಗಮದೇವಾ... ಬಸವಪಥ ಜುಲೈ ೨೦೦೭ರ ವಿಶೇಷ ಸಂಚಿಕೆ ಬಸವ ಸಮಿತಿ, ಬೆಂಗಳೂರು, ಪುಟ-೨೪.

೫. ಅದೇ ಪುಸ್ತಕ, ಪುಟ-೨೭.

೬. ಎಂ.ಚಿದಾನಂದಮೂರ್ತಿ ; ಲೇ. ಬಸವಣ್ಣನವರ ವಂಶದ ಚಿತ್ರ, ಕೃತಿ - ಎನ್ನ ತಂದೆ ಕೂಡಲ ಸಂಗಮದೇವಾ... ಬಸವಪಥ ಜುಲೈ ೨೦೦೭ರ ವಿಶೇಷ ಸಂಚಿಕೆ ಬಸವ ಸಮಿತಿ, ಬೆಂಗಳೂರು, ಪುಟ-೧೮.

೭. ಪ್ರೊ. ಜಿ.ಎಸ್.ಸಿದ್ದಲಿಂಗಯ್ಯ ; ಲೇ.ಮೂಲ ಆಕರಗಳ ಕೊರತೆಗಳು, ಕೃತಿ - ಎನ್ನ ತಂದೆ ಕೂಡಲ ಸಂಗಮದೇವಾ... ಬಸವಪಥ ಜುಲೈ ೨೦೦೭ರ ವಿಶೇಷ ಸಂಚಿಕೆ ಬಸವ ಸಮಿತಿ, ಬೆಂಗಳೂರು, ಪುಟ-೨೧.

೮. ಶ್ರೀ ಜಿ.ವಿ.ಶಾಸ್ತ್ರಿ ; (ಸಂ.) ಬಸವಣ್ಣನವರ ವಚನಗಳು, ಪಾರುಪ್ರಕಾಶನ, ಗದಗ, ೫ನೇ ಮುದ್ರಣ.

೯. ಶ್ರೀ ಮಗ್ಗೆಯ ಮಾಯಿದೇವ ; ಪ್ರಭುವಿರಚಿತ 'ಶಿವಾಧವ ಶಿವಾವಲ್ಲಭ ಮಹದೈಪುರೀಶ್ವರ ' - ಶತಕತ್ರಯವು ವಿರಕ್ತ ತೋಂಟದಾರ್ಯ ವಿರಚಿತ ಕರ್ನಾಟಕ ಟೀಕೆಯೊಡನೆ ಮೈಸೂರು ಸ್ಟಾರ್ ಆಫೀಸ್‌ನಿಂದ ಪ್ರಕಟಣೆ. ೧೯೨೫, ಪುಟ -೩.

೧೦. ಲಿಂ|| ಎಚ್. ದೇವೀರಪ್ಪ (ಸಂ); ''ಬಸವರಾಜ ದೇವರ ರಗಳೆ ''ಬಸವ ಸಮಿತಿ, ಬೆಂಗಳೂರು ತೃತೀಯ ಮುದ್ರಣ : ೨೦೦೩, ಪುಟ -೬೭.

೧೧. ಡಾ. ಪಿ.ವಿ. ನಾರಾಯಣ, (ಕನ್ನಡ ಅನುವಾದ) ; 'ಬಸವ ಪುರಾಣ ' (ತೆಲುಗು ) ತರಳಬಾಳು ಪ್ರಕಾಶನ, ಅಣ್ಣನ ಬಳಗ, ಸಿರಿಗೆರೆ, ೧೯೮೨.

೧೨. ಡಾ. ಆರ್.ಸಿ. ಹಿರೇಮಠ (ಸಂ) ; ಭೀಮಕವಿ ವಿರಚಿತ 'ಬಸವ ಪುರಾಣ ' ಪ್ರಕಾಶನ : ಶ್ರೀ ನಿ.ಪ್ರ.ಮಹಾಂತಸ್ವಾಮಿಗಳು, ಶ್ರೀ ಮುರುಘಾಮಠ, ಧಾರವಾಡ, ೧೯೭೧.

೧೩. ೮. ಶ್ರೀ ಜಿ.ವಿ.ಶಾಸ್ತ್ರಿ ; (ಸಂ.) 'ಬಸವಣ್ಣನವರ ವಚನಗಳು', ಪಾರುಪ್ರಕಾಶನ, ಗದಗ ೫ನೇ ಮುದ್ರಣ, ಪುಟ ಸಂಖ್ಯೆ -೧೦೦, ವಚನ ಸಂಖ್ಯೆ -೧೭೦.

೧೪. ಎಂ.ಚಿದಾನಂದಮೂರ್ತಿ ; 'ಬಸವಣ್ಣನವರು ' ನ್ಯಾಷನಲ್ ಬುಕ್ ಟ್ರಸ್ಟ್ , ಇಂಡಿಯಾ ಹೊಸದೆಹಲಿ, ಪುಟ ಸಂಖ್ಯೆ -೩೧.

೧೫. ಪ್ರೊ॥ ಸಿದ್ಧಲಿಂಗಯ್ಯ ಜಿ.ಎಸ್. ; 'ಶೂನ್ಯ ಸಂಪಾದನೆಗಳು ಒಂದು ಅವಲೋಕನ' ಕನ್ನಡ ಸಾಹಿತ್ಯ ಪರಿಷತ್ತು , ಬೆಂಗಳೂರು, ಮೊದಲ ಮುದ್ರಣ , ೧೯೯೬, ಪುಟ -೮.

೧೬. ಡಾ. ಹೆಚ್.ಚಂದ್ರಶೇಖರ್ ; ಲೇ. ಅಗ್ಗದ ಪ್ರಚಾರಕ್ಕಾಗಿ ಬರೆದ ಅಲ್ಲದ ಕೃತಿ 'ಆನುದೇವಾ ಹೊರಗಣವನು....' ಕೃತಿ - ಎನ್ನ ತಂದೆ ಕೂಡಲ ಸಂಗಮದೇವಾ... ಬಸವಪಥ ಜುಲೈ ೨೦೦೭ರ ವಿಶೇಷ ಸಂಚಿಕೆ , ಬಸವ ಸಮಿತಿ, ಬೆಂಗಳೂರು, ಪುಟ-೭೬.

೧೭. -''- ಪುಸ್ತಕ, ಪುಟ -೭೯.

೧೮. ಡಾ. ಸಿ.ನಾಗಭೂಷಣ ; ಲೇ. ಶಾಸನಗಳಲ್ಲಿ ಬಸವಣ್ಣನವರ ಕಾಲ ಮತ್ತು ಇತಿವೃತ್ತ : ಸಮೀಕ್ಷೆ, ಕೃತಿ - ಎನ್ನ ತಂದೆ ಕೂಡಲ ಸಂಗಮದೇವಾ... ಬಸವಪಥ ಜುಲೈ ೨೦೦೭ರ ವಿಶೇಷ ಸಂಚಿಕೆ ಬಸವ ಸಮಿತಿ, ಬೆಂಗಳೂರು, ಪುಟ-೩೬+೩೭.

೧೯. ಬಿ.ಶಿವಮೂರ್ತಿ ಶಾಸ್ತ್ರಿ ; (ಸಂ) 'ಶ್ರೀ ಬಸವೋದಾಹರಣಮ್, ಬಸವ ಸಮಿತಿ, ಬೆಂಗಳೂರು ತೃತೀಯ ಮುದ್ರಣ, ೨೦೦೬, ಪುಟ : ೯೩.

---

# ಅಧ್ಯಾಯ - ೬

## ಮುಕ್ತಾಯದ ಮುನ್ನ

ನನ್ನ ಎಂ.ಫಿಲ್ ಅಧ್ಯಯನದ ಸಂಪ್ರಬಂಧವು 'ಬಸವಣ್ಣ : ವಿವಾದಿತ ಕೃತಿಗಳು ಒಂದು ಅಧ್ಯಯನ ' ಎಂಬ ಶೀರ್ಷಿಕೆಯಡಿಯಲ್ಲಿ ರಚಿತವಾಗಿದೆ. ಇದುವರೆಗೂ ಬಸವಣ್ಣನ ಮತ್ತು ಆತನ ಅಕ್ಕ ನಾಗಮ್ಮನ ವಿಚಾರವಾಗಿ ಪ್ರಕಟಣೆಯಾಗಿರುವ ಕೃತಿಗಳಲ್ಲಿ ಕೆಲವು ಸಮಾಜದಲ್ಲಿ ವಿವಾದಗಳನ್ನು ಸೃಷ್ಟಿಸಿ ಮುಟ್ಟುಗೋಲಾಗಿವೆ. ಅಂತಹ ಕೃತಿಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಈ ಮೇಲ್ಕಂಡಂತೆ ಮರು ವಿಶ್ಲೇಷಣೆ ಮಾಡಿದ್ದೇನೆ. ಈ ಪ್ರಬಂಧ ರಚನೆಯ ಸಂದರ್ಭದಲ್ಲಿ ಇವುಗಳನ್ನು ಮರುವಿಶ್ಲೇಷಣೆಗೆ ಒಳಪಡಿಸಿಕೊಂಡಾಗ ತುಂಬಾ ಕಡೆಗಳಲ್ಲಿ ಕೆಲವು ತೊಂದರೆಗಳಾದವು ಮತ್ತು ಒಂದೊಂದು ಸಾಹಿತ್ಯ ಕೃತಿಯಲ್ಲಿಯೂ ಒಂದೊಂದು ರೀತಿ ಬಸವಾದಿ ಶರಣರನ್ನು ಚಿತ್ರಿಸಿರುವುದನ್ನು ತಿಳಿದು ಒಂದು ರೀತಿ ಗೊಂದಲದಲ್ಲಿ ಸಿಲುಕಿದ್ದೆ. ಅಂತಹ ಸಂದರ್ಭದಲ್ಲಿ ಪ್ರಬಂಧ ರಚನೆಗೆ ಸಹಾಯಕವಾಗುವಂತಹ ವಿಮರ್ಶಾ ಲೇಖನಗಳನ್ನು ಮತ್ತು ಪೂರಕ ಸಾಹಿತ್ಯ ಗ್ರಂಥಗಳನ್ನು ಬಳಸಿಕೊಂಡಿದ್ದೇನೆ.

ಬಸವಣ್ಣನ ಜೀವನವನ್ನು ಕುರಿತು ಚಿತ್ರಿಸಿದ ಈ ವಿವಾದಿತ ಕೃತಿಗಳ ಬಗ್ಗೆ ನಾನು ಹೇಳಬೇಕೆಂದುಕೊಂಡದ್ದನ್ನೆಲ್ಲಾ ಹೇಳಿದ್ದೇನೆ ಎಂದಾಗಲೀ ಅಥವಾ ಮುಟ್ಟುಗೋಲಾಗಿರುವ ಈ ಮೂರೂ ಕೃತಿಗಳ ಬಗೆಗೆ ಸಂಪೂರ್ಣವಾಗಿ, ತಳಸ್ಪರ್ಶಿಯಾಗಿ ಅಧ್ಯಯನ ಮಾಡಿದ್ದೇನೆ ಎಂದಾಗಲಿ ಹೇಳಿದರೆ ಅದು ನನ್ನ ಮೂರ್ಖತನವಾಗುತ್ತದೆ. ಆದರೂ ಪ್ರಯತ್ನಿಸಿದ್ದೇನೆ ಎಂಬ ಸ್ವಲ್ಪ ಸಮಾಧಾನವಿದೆ. ಇನ್ನೂ ಈ ವಿವಾದಿತ ಕೃತಿಗಳನ್ನು ಹಲವರು ಹಲವು ದೃಷ್ಟಿಕೋನಗಳಿಂದ ಮತ್ತು ಅನೇಕ ಸಿದ್ಧಾಂತ, ತತ್ವಗಳ ಆಧಾರದ ಮೇಲೆ ಅಧ್ಯಯನಕ್ಕೆ ಒಳಪಡಿಸಿ ವಿಶ್ಲೇಷಣೆ ನಡೆಸಬಹುದಾಗಿದೆ. ಇವು ಒಂದೊಂದು ಸಂದರ್ಭ ಒಂದೊಂದು ಪ್ರಕಾರದಲ್ಲಿ ರಚನೆಯಾದಂತಹ ಕೃತಿಗಳಾಗಿದ್ದು , ಇವುಗಳಲ್ಲಿನ ವಿಚಾರಗಳು ಗಂಭೀರವಾಗಿ ಚಿಂತಿಸಬೇಕಾದಂತಹವುಗಳೇ ಆಗಿವೆ. ಮತ್ತು ಈ ವಿಚಾರಗಳನ್ನು ಪ್ರಸ್ತಾಪಿಸುವಾಗ ಲೇಖಕರು ಸರಿಯಾಗಿ ದಾಖಲೆಗಳನ್ನು ನೀಡದೇ ಇರುವುದರಿಂದ ವಿವಾದಗಳು ಸೃಷ್ಟಿಯಾಗಿ ನಿಷೇಧಕ್ಕೆ ಒಳಗಾಗಿರುವುದು ತಿಳಿದುಬರುತ್ತವೆ. ಹೀಗೆ ನಿಷೇಧಕ್ಕೆ ಒಳಗಾದ ಒಂದೊಂದು ವಿವಾದಿತ ಕೃತಿಗಳನ್ನು ಇಟ್ಟುಕೊಂಡು ಒಂದೊಂದು ಎಂ.ಫಿಲ್ ಸಂಪ್ರಬಂಧ ರಚಿಸುವಷ್ಟು ವಿಷಯ ಅವುಗಳಲ್ಲಿ ಅಡಕವಾಗಿವೆ. ಅಷ್ಟೇ ಅಲ್ಲದೆ ಈ ಎಲ್ಲಾ ವಿವಾದಿತ ಮತ್ತು ಮುಟ್ಟುಗೋಲಾದ ಕೃತಿಗಳನ್ನು ಅಧ್ಯಯಿಸಿ ಮಹಾಪ್ರಬಂಧವನ್ನೇ ರಚಿಸಬಹುದು.

೧೨ನೇ ಶತಮಾನದಲ್ಲಿ ಕಲ್ಯಾಣದಲ್ಲಿ ಜರುಗಿದ ಬಹುಮುಖ ಕ್ರಾಂತಿಗೆ ಕಾರಣರಾದವರು ಮತ್ತು ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಪ್ರತಿಪಾದಿಸಿದ ಈ ಬಸವಾದಿ ಶರಣ ಕುಲಜರೂ ಶ್ರೇಷ್ಠ ವಚನಕಾರರೂ ಆಗಿದ್ದಾರೆ. ಸಕಲ ಜೀವಾತ್ಮರಿಗೆ ಲೇಸನ್ನು ಬಯಸಿ ಭುವಿಯನ್ನೇ ಕೈಲಾಸವನ್ನಾಗಿ ಪರಿವರ್ತಿಸಿದವರು ಈ ವಿಶ್ವವಿಭೂತಿಗಳು. ಇವರು ಅರಿತು ಆಚರಿಸಿದ ವಿಶ್ವಮಾನ್ಯ ತತ್ವಗಳು ಇಂದಿಗೂ ಪ್ರಸ್ತುತವಾಗಿವೆ. ಹಾಗೂ ವಿಶ್ವಶಾಂತಿಗೆ, ವಿಶ್ವಬಂಧುತ್ವಕ್ಕೆ, ವಿಶ್ವ ಸರ್ವತೋಮುಖ ಪ್ರಗತಿಗೆ ಸಹಾಯಕವಾಗಿವೆ. ಇಂತಹ ಸಮಯದಲ್ಲಿ ಬಸವಣ್ಣನ ಜಾತಿ, ತಂದೆ -ತಾಯಿ, ಜನನವನ್ನು ಕುರಿತು ಅಧ್ಯಯನ ಮಾಡುವುದಾಗಲೀ ಅಥವಾ ಸೃಜನಶೀಲ ಸಾಹಿತ್ಯ ಕೃತಿಗಳಲ್ಲಿ ದಾಖಲೆಗಳಿಲ್ಲದೆ ಚಿತ್ರಿಸುವುದಾಗಲಿ ನಿಜಕ್ಕೂ ಅವಮಾನವೇ ಸರಿ. ಸಂಸಾರದ ಬಂಧನಗಳಿಂದ ಬಿಡಿಸಿಕೊಂಡು ಸಮಾಜದ ಉನ್ನತಿಗಾಗಿ ದುಡಿದ ಶರಣರ ಶೀಲವನ್ನು ಶಂಕಿಸುವುದರಿಂದ ಮತ್ತು ಪ್ರಸ್ತಾಪಿಸುವುದರಿಂದ ಯಾರಿಗೂ ಲಾಭವಿಲ್ಲ. ಆದ್ದರಿಂದ ಇಂತಹ ಕೆಲಸಗಳು ವ್ಯರ್ಥವೆಂದು ಹೇಳಬಹುದು. ಈ ರೀತಿಯ ವಿಚಾರಗಳ ಬಗ್ಗೆ ಯೋಚಿಸುವುದನ್ನು ಬಿಟ್ಟು ಸಮಾಜಮುಖಿ ಚಿಂತನೆಗಳಿಗೆ ಲೇಖಕರು ತಮ್ಮನ್ನು ತೊಡಗಿಸಿಕೊಳ್ಳಬೇಕಿದೆ.

ಸಮಾಜದಲ್ಲಿನ ಸಮಕಾಲೀನ ಲೋಪದೋಷಗಳನ್ನು ಕುರಿತು ಚಿಂತಿಸಿ ಅವುಗಳನ್ನು ಕೃತಿಗಳಲ್ಲಿ ಪ್ರಕಟಿಸಿ ಜನಸಮುದಾಯಕ್ಕೆ ತಲುಪಿಸುವ ಮತ್ತು ಬಗೆಹರಿಯದ ವಿಚಾರಗಳ ಬಗೆಗೆ ಲೇಖಕರು ಚಿಂತಿಸಿ ಮಾರ್ಗದರ್ಶನ ನೀಡುವ ಸಾಹಿತ್ಯ ಕೃತಿಗಳನ್ನು ರಚಿಸಬೇಕು. ಹೀಗೆ ಶತ ಶತಮಾನಗಳಿಂದಲೂ ನೊಂದು-ಬೆಂದವರಿಗೆ, ಬಡವರಿಗೆ ದಾರಿದೀಪವಾಗುವಂತಹ ಬರವಣಿಗೆಯುಳ್ಳ ಕೃತಿಗಳನ್ನು ಪ್ರಕಟಿಸುವ ಕೆಲಸಗಳನ್ನು ಕೈಗೊಳ್ಳಬೇಕು. ಅವರಲ್ಲಿನ ಮೂಢ ನಂಬಿಕೆಗಳನ್ನು ಹಾಗೂ ಅಜ್ಞಾನವನ್ನು ದೂರ ಮಾಡಬೇಕು ಮತ್ತು ಅವರ ಸುತ್ತ ಬಿಗಿದಿರುವ ಬಂಧನಗಳಿಂದ ಅವರನ್ನು ಬಿಡಿಸುವ ಕೆಲಸಗಳನ್ನು ಲೇಖಕರು ತಮ್ಮ ಕೃತಿಗಳಿಂದ ಮಾಡಬೇಕು. ೯೦೦ ವರ್ಷಗಳ ಹಿಂದೆ ಹೇಗೆ ಬಸವಾದಿ ಶರಣರು ಜಾತಿರಹಿತ, ವರ್ಗರಹಿತ ಸಮಾಜವನ್ನು ಕಟ್ಟಿದಂತೆಯೇ ಇಂದೂ ಸಹ ಸಮಾಜಚಿಂತಕರಾದ ಲೇಖಕರು, ಬುದ್ಧಿಜೀವಿಗಳು, ಬರಹಗಾರರು ಸರ್ವಸಮಾನತೆಯ ನಾಡನ್ನು ನಿರ್ಮಿಸಲು ಮುಂದಾಗಬೇಕು. ಹೀಗೆ ಅವರ ಸದ್ಗುಣಗಳನ್ನು ನಾಡಿನ ಪ್ರತಿಯೊಬ್ಬ ಪ್ರಜೆಯೂ ಅಳವಡಿಸಿಕೊಂಡಿದ್ದೇ ಆದರೆ ನಾಡಿನ ಸರ್ವತೋಮುಖ ಬೆಳವಣಿಗೆಯೊಂದಿಗೆ ಶರಣರು ಕಂಡ ಕನಸು ನನಸಾಗುವುದರಲ್ಲಿ ಸಂದೇಹವೇ ಇಲ್ಲ ಎಂದು ಹೇಳಬಹುದು.

ಬಸವಣ್ಣನ ಬಾಲ್ಯದ ಸುತ್ತ ಮತ್ತು ಚೆನ್ನಬಸವಣ್ಣನ ತಂದೆ ಹಾಗೂ ಅಕ್ಕನಾಗಮ್ಮನ ಶೀಲದ ಸುತ್ತ ಅನೇಕ ಪವಾಡ ಕೃತಿಗಳೇ ಹುಟ್ಟಿಕೊಂಡಿವೆ. ಇವರ ವಿಚಾರಗಳನ್ನು ಕುರಿತು ಸ್ಪಷ್ಟಪಡಿಸುವ ಶಾಸನಗಳು ಹಾಗೂ ಸಾಹಿತ್ಯ ಕೃತಿಗಳು ಚಾರಿತ್ರಿಕಾಂಶಗಳಿಗಿಂತಲೂ ಕಟ್ಟುಕತೆಗಳೇ ಎನ್ನಬಹುದು. ಇವರ ಚರಿತ್ರೆಯ ಕೆಲವು ಅಂಶಗಳು ಇಂದಿಗೂ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ , ಶಾಸನಗಳಲ್ಲಿ ಮತ್ತು ಸ್ವರಚಿತ ವಚನಗಳಲ್ಲಿ ದೊರೆಯುತ್ತವೆ. ಆದರೂ ಸಹ ಅವು ಅಸ್ಪಷ್ಟವಾಗಿವೆ ಹಾಗೂ ಅನಿರ್ದಿಷ್ಟವಾಗಿವೆ. ಇವುಗಳನ್ನು ಇಂದು ವೈಚಾರಿಕ, ವೈಜ್ಞಾನಿಕ ಮತ್ತು ಆಧುನಿಕ ಸಲಕರಣೆಗಳಿಂದ ವಿಭಿನ್ನ ದೃಷ್ಟಿಕೋನಗಳಿಂದ ನೋಡಬೇಕಾಗಿದೆ. ಈ ಮೇಲ್ಕಂಡ ಕೃತಿಗಳಲ್ಲಿ ಅಸಂಬದ್ಧ ಹೇಳಿಕೆಗಳನ್ನು ನೀಡಿದಂತೆ ಇಂದೂ ಸಹ ಹೇಳಿಕೆಗಳನ್ನು ನೀಡುವುದರಿಂದ ಇವು ಮುಂದಿನ ತಲೆಮಾರಿನ ಓದುವ ಜನತೆಯ ಮೇಲೆ ಪ್ರಭಾವ ಬೀರುತ್ತವೆ. ಆದ್ದರಿಂದ ಯಾವುದೇ ರೀತಿಯ ದಾಖಲೆಗಳಿಲ್ಲದ ವಿಚಾರಗಳನ್ನು, ಹೇಳಿಕೆಗಳನ್ನು ಆತುರವಾಗಿ ಸೃಜನಶೀಲ ಸಾಹಿತ್ಯ ಕೃತಿಗಳಲ್ಲಿ ರಚಿಸಬಾರದಾಗಿದೆ.

ಶರಣರು ಮಾನವೀಯ ಮೌಲ್ಯಗಳ ಆಧಾರದ ಮೇಲೆ ವೈಚಾರಿಕ, ಆಧ್ಯಾತ್ಮಿಕ ತಳಹದಿಯ ಮೇಲೆ ಲಿಂಗಾಯಿತ ಧರ್ಮವನ್ನು ರೂಪಿಸಿದವರು. ಇವೆಲ್ಲದರ ಸಾಕಾರಮೂರ್ತಿಗಳಾಗಿದ್ದ ಇವರು ಸಮಗ್ರ ಕ್ರಾಂತಿಗೈದು ಇಡೀ ವಿಶ್ವದಲ್ಲಿಯೇ ಅದ್ವಿತೀಯ ವ್ಯಕ್ತಿತ್ವವನ್ನು ಹೊಂದಿದವರಾಗಿದ್ದಾರೆ. ಇವರ ಆಚಾರ-ವಿಚಾರಗಳು ಇಂದಿಗೂ, ಮುಂದಿಗೂ, ಸರ್ವಕಾಲಕ್ಕೂ ಪ್ರಸ್ತುತವಾಗಿರುವ ಈ ಸಂದರ್ಭದಲ್ಲಿ ಅವರ ಜಾತಿ ಮತ್ತು ಹುಟ್ಟಿನ ಬಗೆಗೆ ಇರುವ ಅನುಮಾನಗಳನ್ನು ಯಾರೂ ಕೆದಕಬಾರದು ಅಥವಾ ಹುಡುಕುವ ಹುಚ್ಚು ಕಾರ್ಯಕ್ಕೆ ಮುಂದಾಗಬಾರದು. ಅವರ ವೈಚಾರಿಕ ಪ್ರಜ್ಞಾಪೂರ್ವಕ ತಾತ್ವಿಕ ವಿಚಾರಗಳನ್ನು ಕುರಿತು ಇನ್ನಷ್ಟು ಜೀವನದಲ್ಲಿ ಅಳವಡಿಸಿಕೊಂಡು ಸಮಾಜದಲ್ಲಿ ಬಾಳಬೇಕಾಗಿದೆ. ಹಾಗೆಯೇ ಪ್ರಗತಿಪರ ಸಮಾಜ ಸುಧಾರಕರಾದ ಲೇಖಕರು ತಮ್ಮ ಕೃತಿಗಳಲ್ಲಿ ಈ ವಿಚಾರಗಳನ್ನು ಪ್ರಸ್ತಾಪಿಸುವ ಕಾಯಕವನ್ನು ಕೈಗೊಳ್ಳಬೇಕಾಗಿದೆ.

ಬಸವಣ್ಣ ನೂರಾರು ವರ್ಷಗಳ ಹಿಂದೆ ಪ್ರಾರಂಭಿಸಿದ ಹೊಸ ಯುಗವು ಕಲ್ಯಾಣ ಕ್ರಾಂತಿಯಿಂದ ಅಂದು ಸಮಾಪ್ತಿಯಾದರೂ ಸಹ ಅದು ಹರಡಿದ ಬೆಳಕು ಇಂದಿಗೂ ಮಾರ್ಗದರ್ಶನ ಮಾಡುತ್ತ ದಾರಿದೀಪವಾಗಿದೆ ಎಂಬುದನ್ನು ತಿಳಿಯಬಹುದು. ಇಂತಹ ಸಂದರ್ಭದಲ್ಲಿ ಸಮಾಜ ಸುಧಾರಕ ಹಾಗೂ ಸಾಮಾಜಿಕ, ಧಾರ್ಮಿಕ ಚಳುವಳಿಯ ಕ್ರಾಂತಿಪುರುಷನಾದ ಬಸವಣ್ಣನ ಮತ್ತು ಬಸವಣ್ಣನ ಅಕ್ಕ ನಾಗಮ್ಮನ ಜೀವನದ ಚಾರಿತ್ರಿಕ

ಅಂಶಗಳನ್ನು ಊಹಾತ್ಮಕವಾಗಿ ಅವರ ಚಾರಿತ್ರ್ಯವನ್ನು ಚಿತ್ರಿಸಿ ಅನುಮಾನಿಸಿರುವುದು ಸರಿಯೆನಿಸುವುದಿಲ್ಲ. ಇನ್ನೂ ಹೆಚ್ಚಾಗಿ ಇವರ ಜೀವನದ ಮೇಲೆ ಮತ್ತು ಕಲ್ಯಾಣ ಕ್ರಾಂತಿಯ ಮೇಲೆ ಬೆಳಕು ಚೆಲ್ಲುವಂತಹ ಕೆಲಸ ಆಗಬೇಕಿದೆ. ಅಷ್ಟೇ ಅಲ್ಲದೆ ಇವರ ಉಲ್ಲೇಖಗಳಿರುವ ಶಾಸನಾಧಾರಿತ ಮತ್ತು ಪ್ರಾಚೀನ ಸಾಹಿತ್ಯ ಕೃತಿಗಳನ್ನು ಸಂಗ್ರಹಿಸಿ, ಪರಿಷ್ಕರಿಸಿ, ಅಭ್ಯಸಿಸಿ, ವಿಶ್ಲೇಷಣೆಗೆ ಒಳಪಡಿಸಬೇಕಿದೆ. ಹಾಗೆಯೇ ಇದುವರೆಗೂ ದೊರೆತಿರುವ ಶಾಸನಗಳನ್ನು ಮತ್ತು ಸಾಹಿತ್ಯ ಕೃತಿಗಳನ್ನು ಮರು ಪರಿಶೀಲನೆಗೆ ಒಳಪಡಿಸಿ ಮರು ವ್ಯಾಖ್ಯಾನಿಸುವ ಕೆಲಸ ನಡೆಯಬೇಕಾಗಿದೆ.

ಈ ವಿವಾದಿತ ಕೃತಿಗಳಲ್ಲಿನ ವಿಚಾರಗಳನ್ನು ನನ್ನ ಸಿದ್ಧಾಂತದ ಜ್ಞಾನ ಶಿಸ್ತಿನಲ್ಲಿ ವಿಶ್ಲೇಷಣೆಗೆ ಒಳಪಡಿಸಿಕೊಂಡಂತಹುಗಳೇ ಆಗಿವೆ. ಇವುಗಳನ್ನು ಸಮುದಾಯ ನಿರ್ಧರಿಸಬೇಕೇ ವಿನಃ ಒಬ್ಬ ವ್ಯಕ್ತಿ ಅಥವಾ ಸರ್ಕಾರ ನಿರ್ಧರಿಸುವ ಕೆಲಸವಲ್ಲ. ಹಾಗೆಯೇ ಈ ಕೃತಿಗಳಲ್ಲಿನ ವಿಚಾರಗಳನ್ನು ಹಿರಿಯ ಸಂಶೋಧಕರೂ, ಸಾಹಿತ್ಯ ವಿಮರ್ಶಕರೂ ಹಾಗೂ ಸಮಾಜಮುಖಿ ಲೇಖಕರು ವಿವರಿಸಬೇಕಾದ ಅಂಶಗಳಾಗಿವೆ. ನನ್ನಂತಹ ಕಿರಿಯನಿಗೆ ಇಂತಹ ಹಿರಿಯರ ಕೃತಿಗಳನ್ನು ವಿಮರ್ಶೆ ಮಾಡುವ, ಪರಿಶೀಲಿಸುವ, ಪರೀಕ್ಷಿಸುವ ಅಥವಾ ಮರು ವಿಚಾರಣೆಗೆ ಒಳಪಡಿಸಿ ವಿಶ್ಲೇಷಿಸುವ ಶಕ್ತಿ, ಸಾಮರ್ಥ್ಯ ಮತ್ತು ಜ್ಞಾನಸಂಪತ್ತು ನನ್ನಲ್ಲಿಲ್ಲ ಎಂದು ನಾನು ಭಾವಿಸಿದ್ದೇನೆ.

ಈ ಪ್ರಬಂಧದಲ್ಲಿ ಅಡಕವಾಗಿರುವ ಬಹಳಷ್ಟು ವಿಚಾರ, ವಿಷಯಗಳಿಗಾಗಿ ಇತರ ಕೃತಿಗಳನ್ನು ಆಶ್ರಯಿಸಿದ್ದೇನೆ. ಆದರೆ, ಪ್ರಬಂಧದ ಒಟ್ಟೂ ಸ್ವರೂಪದ ಹಾಗೂ ವಿವರಗಳಿಗಾಗಿ ಹೊಣೆಗಾರ ನಾನೇ ಆಗಿದ್ದೇನೆ. ಇಲ್ಲಿ ಲೇಖಕರಾಗಲೀ ಅಥವಾ ವಿಮರ್ಶಕರಾಗಲೀ ಮುಖ್ಯವಲ್ಲ ಎಂಬುದನ್ನು ಸ್ಪಷ್ಟಪಡಿಸಬಯಸುತ್ತೇನೆ.

ಇಂದು ನಮ್ಮ ಹುಟ್ಟಿನ ಬಗ್ಗೆಯೇ ನಮಗೆ ಖಚಿತವಾಗಿ ಗೊತ್ತಿಲ್ಲದಿರುವಾಗ ಸುಮಾರು ೯೦೦ ವರ್ಷಗಳ ಹಿಂದಿನ ವ್ಯಕ್ತಿಗಳಾದ ಬಸವಣ್ಣನ ಮತ್ತು ಚೆನ್ನಬಸವಣ್ಣನ ಜನನದ ಬಗ್ಗೆ, ಕುಲದ ಬಗ್ಗೆ ಖಚಿತವಾದ ಆಧಾರ ಸಾಮಾಗ್ರಿಗಳಿಲ್ಲದ ಈ ಸಂದರ್ಭದಲ್ಲಿ ಅವರ ವೈಯಕ್ತಿಕ ಜೀವನದ ವಿಚಾರಗಳನ್ನು ಅನುಮಾನಾಸ್ಪದವಾಗಿ ರಚಿಸಬಾರದು. ಇಂತಹ ಊಹಾತ್ಮಕ ಕಲ್ಪನಾಧಾರಿತ ವಿಚಾರಗಳನ್ನು ಸೃಜನ ಸಾಹಿತ್ಯ ಕೃತಿಯೊಂದರಲ್ಲಿ ಪ್ರಗತಿಪರ ಚಿಂತಕರು, ಸಮಾಜ ಸುಧಾರಕರು ಆದ ಲೇಖಕರು ಚಿತ್ರಿಸಿರುವುದು ಸರಿಯೇ? ಎಂಬುದಿಲ್ಲಿ ಪ್ರಮುಖ ಪ್ರಶ್ನೆಯಾಗಿದೆ. ಬೇಗ ಪ್ರಚಾರಕ್ಕೆ ಬರುವ ಗೀಳಿಗಾಗಿ ಈ ರೀತಿ

ಮಾಡುವುದಾದರೆ ಅಂತಹ ಕೃತಿಗಳನ್ನು ಹಾಗೆಯೇ ತಿರಸ್ಕರಿಸಿಬಿಡಬೇಕು. ಇಂತಹ ಕೃತಿಗಳ ವಿರುದ್ಧ ವಿವಾದಗಳನ್ನು ಸೃಷ್ಟಿಸುವುದರಿಂದ ಮತ್ತು ಸಭೆ ಸಮಾರಂಭಗಳನ್ನು ನಡೆಸಿ ಮುಟ್ಟುಗೋಲು ಹಾಕಿಸುವುದರಿಂದ ಇಂತಹ ವಿಚಾರಗಳುಳ್ಳ ಕೃತಿಗೆ ನಿಜಕ್ಕೂ ಮಹತ್ವ ದೊರೆಯುತ್ತದೆ. ಆದ್ದರಿಂದ ಅನುಮಾನಾಸ್ಪದ ವಿಚಾರಗಳನ್ನು ಕುರಿತು ರಚಿಸಲಾದ ಸಾಹಿತ್ಯ ಕೃತಿಗಳನ್ನು ಸಮಾಜದಿಂದ ಓದುಗರು ನಿರ್ಲಕ್ಷಿಸಬೇಕೇ ವಿನಃ ಸರ್ಕಾರ ಮಧ್ಯಪ್ರವೇಶಿಸಿ ಕೃತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಬಾರದು. ನ್ಯಾಯಾಲಯವು ಇಂತಹ ವಿಚಾರಗಳನ್ನು ಕುರಿತು ಮುಂದೆಯಾದರೂ ಸಾಹಿತ್ಯ ವಿಮರ್ಶಕರಿಗೆ ತೀರ್ಮಾನಿಸುವ ಹಕ್ಕನ್ನು ನೀಡಬೇಕು.

ಮಾನವರೆಲ್ಲರೂ ಒಂದೇ ಕುಲ, ಅದೇ ಮಾನವ ಕುಲ. ಒಂದೇ ಜಾತಿ, ಅದೇ ಮಾನವ ಜಾತಿ ಎಂಬ ಸಾರ್ವಕಾಲಿಕ ಸತ್ಯವನ್ನು ಶರಣ ಧರ್ಮದ ನಾಯಕನಾದ ಹಾಗೂ ಸದ್ಗುಣ ಸಂಪನ್ನನೂ ಆದ ಶ್ರೀ ಬಸವಣ್ಣನವರು ತಮ್ಮ ವಚನಗಳ ಮೂಲಕ ಸಮಸ್ತ ಮಾನವ ಕುಲಕ್ಕೆ ಸಾರಿ ಹೇಳಿದ್ದಾರೆ. ಉಚ್ಚ ಜಾತಿ, ನೀಚ ಜಾತಿ ಎಂದು ತಮ್ಮ ತಮ್ಮೊಳಗೆ ಹೊಡೆದಾಡಿ ಸರ್ವನಾಶವಾಗುತ್ತಿರುವ ಬುದ್ಧಿಗೇಡಿ ಮನುಷ್ಯ ಪ್ರಾಣಿಗಳಿಗೆ ಬಸವಣ್ಣನವರು ವಚನಗಳಲ್ಲಿ ಸಕಾಲಿಕ ಬುದ್ಧಿ ಹೇಳಿ ಕಣ್ತೆರೆಸುವ ಪ್ರಯತ್ನ ಮಾಡಿದ್ದಾರೆ.

ಈ ಭೂಮಿಯ ಮೇಲೆ ನಾವೆಲ್ಲರೂ ಮೂಲತಃ ಮನುಷ್ಯರಾಗಿಯೇ ಹುಟ್ಟುತ್ತೇವೆ. ಒಂದೇ ಆಕಾರ, ಅದೇ ಮಾನವ ಆಕಾರ, ಅದೇ ಅಸ್ತಿಪಂಜರ, ಅದೇ ಮಾಂಸ, ಅದೇ ರಕ್ತ, ಅದೇ ಅಂಗಾಂಗಗಳು, ಅದೇ ಪಂಚೇಂದ್ರಿಯಗಳು, ಅದೇ ಮೆದುಳು, ಅದೇ ಮನಸ್ಸು - ಎಲ್ಲವೂ ಅದೇ - ಎಲ್ಲಕ್ಕೂ ಏಕ ರೂಪತೆ. ವಸ್ತು, ಸ್ಥಿತಿ ಹೀಗಿದ್ದು ಉಚ್ಚ-ನೀಚ ಬೇಧ-ಭಾವ ಏಕೆ ಎಂಬುದು ಗುರು ಕಬೀರರ ಪ್ರಶ್ನೆ. ನಿಜ ಜಾತಿ ತೆರೆಮರೆಯ ಅರ್ಥಹೀನ ತಾರತಮ್ಯ, ಘರ್ಷಣೆ, ಹಿಂಸೆ, ಅಶಾಂತಿಗಳಿಗೆ ಇನ್ನಾದರೂ ಮುಕ್ತಾಯ ಹಾಡೋಣ. ಮನುಷ್ಯರೆಲ್ಲಾ ಒಂದೇ, ಮನುಜ ಕುಲ ಒಂದೇ ಎಂಬ ಶರಣರ, ಸಂತರ ಹಾಗೂ ದಾಸರ ಸಂದೇಶವನ್ನು ಅಕ್ಷರಶಃ ಕಟ್ಟುನಿಟ್ಟಾಗಿ ಪಾಲಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸೋಣ. ನೈಜ ಮಾನವೀಯ ಮೌಲ್ಯಗಳನ್ನು ಮೆರೆದು ಆದರ್ಶಪೂರ್ಣ ನಾಗರಿಕ ಸಮಾಜ ನಿರ್ಮಿಸೋಣ.

ಲೇಖಕರು, ಬರಹಗಾರರು ಇಂದು ಹೋರಾಟ ಮಾಡಬೇಕಾದರೆ, ಪ್ರಚಾರ ಪಡೆಯಬೇಕಾದರೆ ರಾಜ್ಯದಲ್ಲಿ, ದೇಶದಲ್ಲಿ ಅನೇಕ ಮೂಲಭೂತ ಸಮಸ್ಯೆಗಳಿವೆ. ಅವುಗಳ

ಬಗ್ಗೆ ಒಂದು ಸಾಮಾಜಿಕ ನೆಲೆಯಲ್ಲಿ ಹೋರಾಟವನ್ನಾದರೂ ಮಾಡಿದರೆ ಒಂದು ಶಾಶ್ವತವಾದ ಹೆಸರಾದರೂ ಉಳಿಯುತ್ತದೆ. ಈ ಅಧ್ಯಯನ ಪ್ರಬಂಧದಲ್ಲಿ ಈ ವಿವಾದಿತ ಕೃತಿಗಳಲ್ಲಿನ ಒಟ್ಟಾರೆ ಚಿತ್ರಣದ ಸಮಗ್ರ ಸ್ವರೂಪವನ್ನು ನೀಡಲು ಸಾಧ್ಯವಾಗಿಲ್ಲ. ಇಲ್ಲಿ ನನ್ನ ಅಧ್ಯಯನದ ವ್ಯಾಪ್ತಿಗೆ ಸಂಬಂಧಪಟ್ಟ ಕೆಲವೊಂದು ವಿಚಾರಗಳನ್ನು ಹಾಗೂ ಹೇಳಿಕೆಗಳನ್ನು ಮಾತ್ರ ಮುಖ್ಯವಾಗಿಟ್ಟುಕೊಂಡು ಚರ್ಚಿಸಲಾಗಿದೆ. ಅಷ್ಟೇ ಅಲ್ಲದೆ ಈ ವಿವಾದಿತ ಕೃತಿಗಳಲ್ಲಿನ ವಿಚಾರಗಳನ್ನು ವಿವಿಧ ಆಯಾಮಗಳಿಂದ ನೋಡಲು ಇನ್ನೂ ಹಲವು ಅವಕಾಶಗಳಿವೆ.

---

## ಆಕರ ಗ್ರಂಥಗಳು


| | |
|---|---|
| ೧. ಗಿರೀಶ್ ಕಾರ್ನಾಡ್ | 'ತಲೆದಂಡ '<br>ಮನೋಹರ ಗ್ರಂಥಮಾಲೆ<br>ಧಾರವಾಡ, ೧೯೯೫. |
| ೨. ಡಾ. ನಾರಾಯಣ ಪಿ.ವಿ. | 'ಧರ್ಮಕಾರಣ ',<br>ಮುದ್ರಕರು : ನೇತ್ರಾ ಪ್ರಿಂಟರ್ಸ್<br>ಬೆಂಗಳೂರು, ೧೯೯೫. |
| ೩. ಡಾ. ಬಂಜಗೆರೆ ಜಯಪ್ರಕಾಶ್ | 'ಆನುದೇವಾ ಹೊರಗಣವನು ',<br>ಲಕ್ಷ್ಮೀಪ್ರಕಾಶನ, ಬೆಂಗಳೂರು, ೨೦೦೭. |
| ೪. ಲಂಕೇಶ್ ಪಿ. | 'ಸಂಕ್ರಾಂತಿ', ಪತ್ರಿಕೆ ಪ್ರಕಾಶನ<br>(೧೧ನೇ ಮುದ್ರಣ )<br>ಬೆಂಗಳೂರು -೨೦೦೧ |
| ೫. ಶಿವಪ್ರಕಾಶ್ ಹೆಚ್.ಎಸ್. | 'ಮಹಾಚೈತ್ರ',<br>ರಂಗಸಂಪದ ಪ್ರಕಾಶನ<br>ಬೆಂಗಳೂರು -೧೯೮೬. |
| ೬. ಶಿವಪ್ರಕಾಶ್ ಹೆಚ್.ಎಸ್. | 'ಮಹಾಚೈತ್ರ ',<br>ನವಕರ್ನಾಟಕ ಪ್ರಕಾಶನ,<br>(ಏಳನೇ ಮುದ್ರಣ )<br>ಬೆಂಗಳೂರು -೧೯೯೫ |

# ಪರಾಮರ್ಶನ ಲೇಖನಗಳು :

೧. ಚಂದ್ರಶೇಖರ ಪಾಟೀಲ (ಸಂ. ) : 'ಸಂಕ್ರಮಣ ' ಸಂಕ್ರಮಣ ಪ್ರಕಾಶನ, ಬೆಂಗಳೂರು, ಸಂಪುಟ -೪೧ ಸಂಚಿಕೆ -೬, ನವೆಂಬರ್ - ಡಿಸೆಂಬರ್, ೨೦೦೬.
೧) ಬಂಜೆಗೆರೆ ಅವರ 'ಅನುದೇವಾ ಹೊರಗಣವನು... ' -ಎ.ಎಸ್.ಹಿರೇಮಠ.
೨) ಬಸವಣ್ಣನವರ ಜಾತಿಮೂಲ : ಕೇವಲ ಕಾಲ್ಪನಿಕ ವಾದ - ಬಿ.ರಾಜಶೇಖರಪ್ಪ.

೨. - '' - ಸಂಪುಟ : ೩೨, ಸಂಚಿಕೆ -೭, ಜುಲೈ ೧೯೯೭.
೧) ಧರ್ಮಕಾರಣದ ಹಿಂದಿರುವ ರಾಜಕಾರಣ - ಬಿ.ಎನ್.ಮಂಜುಳಾ.
೨) ಪಿ.ವಿ.ನಾರಾಯಣರ 'ಧರ್ಮಕಾರಣ ' -ರೇವಯ್ಯ ಒಡೆಯರ್.

೩. - '' - ಸಂಪುಟ : ೪೨, ಸಂಚಿಕೆ -೨, ಮಾರ್ಚ್ - ಏಪ್ರಿಲ್ ೨೦೦೭.
೧) ಬಂಜೆಗೆರೆ ಅವರ 'ಅನುದೇವಾ' : ಪ್ರತಿಕ್ರಿಯೆ -ಗುಡಿಹಳ್ಳಿ ನಾಗರಾಜ.

೪. - '' - ಸಂಪುಟ : ೪೨, ಸಂಚಿಕೆ -೪, ಜುಲೈ - ಆಗಸ್ಟ್ ೨೦೦೭.
೧) 'ಅನುದೇವಾ ' ನಿರ್ಮಿತ ಹಗರಣ - ಶಂಕರ ಮ.ಪಾಟೀಲ.

೫. ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠ (ರಿ.) ಶ್ರೀ ಬೃಹನ್ಮಠ, ಚಿತ್ರದುರ್ಗ ಸತ್ಯಶುದ್ಧ ಕಾಯಕ ತ್ರೈಮಾಸಿಕ ಸಂಪುಟ : ೬, ಸಂಚಿಕೆ ೩,೪, ಮಾರ್ಚ್-ಆಗಸ್ಟ್ ೧೯೯೬.
೧) ಪಿ.ವಿ.ನಾರಾಯಣರ ಕಾದಂಬರಿ 'ಧರ್ಮಕಾರಣ ' :ಒಂದು ಅನಿಸಿಕೆ -ಶ್ರೀಮತಿ ಸೌ.ಮೀನಾರಾವ್.

೬. ಜಯದೇವಪ್ಪ ಜೈನಕೇರಿ : ಸಾಹಿತ್ಯ ಸಂಪದ (ಪ್ರಬಂಧ ಸಂಕಲನ ) ಶಾಂತಲಾ ಪ್ರಕಾಶನ, ಶಿವಮೊಗ್ಗ ಮೊದಲ ಮುದ್ರಣ ೨೦೦೪.
೧) ಶರಣ ಸಂಸ್ಕೃತಿ ಮತ್ತು ಸಾಮರಸ್ಯ ...
೨) ಅವಿರಳಜ್ಞಾನಿ ಚೆನ್ನಬಸವಣ್ಣ...
೩) ಮಹಾಪ್ರಸಾದಿ ಡೋಹರ ಕಕ್ಕಯ್ಯ.

೭. ನಟರಾಜ್ ಹುಳಿಯಾರ್ : 'ಗಾಳಿಬೆಳಕು ' ಸಾಂಸ್ಕೃತಿಕ ಬರಹಗಳು : ಚಂದನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಬೆಂಗಳೂರು, ಮೊದಲ ಮುದ್ರಣ ೨೦೦೨.
೧) 'ಧರ್ಮಕಾರಣದ ಸುತ್ತ ಕ್ಷುದ್ರ ರಾಜಕಾರಣ '
೨) ಕಟಕಟೆಯಲ್ಲಿ ಪುಸ್ತಕಗಳು.

೮. ರುದ್ರೇಶ್ ಬಿ. ಅದರಂಗಿ (ಉಪಸಂಪಾದಕರು) :ಬಸವಪಥ, ಬಸವ ಸಮಿತಿ, ಬೆಂಗಳೂರು, ಸಂಪುಟ :೩೦ ಸಂಚಿಕೆ -೧, ಏಪ್ರಿಲ್ ೨೦೦೮.
೧) ಅಕ್ಕಮಹಾದೇವಿಯರ ಒಂದು ವಚನ- ಡಾ. ಜಯಶ್ರೀದಂಡೆ.
೨) ಅಕ್ಕಮಹಾದೇವಿ : ವಚನಗಳ ನೆಲೆಯಲ್ಲಿ - ಡಾ.ಕಮಲಾ ಹಂಪನಾ.
೩) ಅಕ್ಕ ಮತ್ತು ಕೌಟುಂಬಿಕ ಸಂಬಂಧಗಳು - ಶ್ರೀಮತಿ ಶೋಭಾದೇವಿ ಚೆಕ್ಕಿ.
೪) ಜಾನಪದದಲ್ಲಿ ಅಕ್ಕಮಹಾದೇವಿ - ಡಾ.ಶಾಂತಾ ಇಮ್ರಾಪುರ.

೯. - '' - ಬಸವ ಜಯಂತಿ ವಿಶೇಷಾಂಕ, ಸಂಪುಟ :೩೦ ಸಂಚಿಕೆ -೨, ಮೇ ೨೦೦೮.
೧) ಕಾಯಕ ಜೀವಿಗಳು ಮತ್ತು ಬಸವಣ್ಣ - ಪ್ರೊ. ಜಿ.ಎಸ್.ಸಿದ್ಧಲಿಂಗಯ್ಯ.
೨) ಬಸವದಾರಿಯೆಮಗನಿವಾರ್ಯ -ಡಾ. ಪ್ರದೀಪಕುಮಾರ್, ಹೆಬ್ರಿ.
೩) ತಮ್ಮಿಂದ ತಾವಾದ ಬಸವಣ್ಣನವರು - ಡಾ.ಜಯಶ್ರೀದಂಡೆ.
೪) ಬಸವನಬೆಳಕು ಎಲ್ಲರಲ್ಲೂ ಬರಲಿ - ಶ್ರೀ ಬಿ.ಎನ್.ಸೊಲ್ಲಾಪುರೆ.
೫) ಕಲ್ಯಾಣಕ್ರಾಂತಿ - ಶ್ರೀ ಅರವಿಂದ ಚೊಕ್ಕಾಡಿ.
೬) ನೀಲಾಂಬಿಕೆ - ನಾಡೋಜ ಡಾ.ಚೆನ್ನವೀರ ಕಣವಿ.

೧೦. - '' - ಸಂಪುಟ :೨೯ ಸಂಚಿಕೆ -೮, ನವೆಂಬರ್ ೨೦೦೭.
೧) ಬಸವ ಯೋಗ - ಶರಣೆ ಕಮಲಾ ಎಸ್.ಶೆಟ್ಟರ.
೨) ಅಕ್ಕಮಹಾದೇವಿ ಕಂಡಂತೆ ಅಣ್ಣ ಬಸವಣ್ಣ - ಶ್ರೀ ಪರಮೇಶ್ವರಯ್ಯ ಸೊಪ್ಪಿಮಠ.
೩) ವೈದ್ಯ ವಿಜ್ಞಾನಿ ಚೆನ್ನಬಸವಣ್ಣನವರು - ಡಾ. ಪಿ.ಎಸ್.ಶಂಕರ್.

೧೧. - " - ಸಂಪುಟ :೨೯ ಸಂಚಿಕೆ -೯, ಡಿಸೆಂಬರ್ ೨೦೦೭.
೧) ವಚನಗಳ ಪ್ರಸ್ತುತತೆ - ಪ್ರೊ. ಜಿ.ಎಸ್.ಸಿದ್ಧಲಿಂಗಯ್ಯ.
೨) ವಚನ ತರಂಗ - ಶ್ರೀ ಟಿ.ಆರ್.ಮಹಾದೇವಯ್ಯ.

೧೨. - " - ಎನ್ನ ತಂದೆ ಕೂಡಲಸಂಗಮದೇವಾ... ಜುಲೈ ೨೦೦೭ರ ವಿಶೇಷ ಸಂಚಿಕೆ.
೧) ಕುಲದ ಹೊರಗೆ ನಿಂತ ಬಸವೇಶ್ವರರು -ಡಾ. ದೇ.ಜವರೇಗೌಡ.
೨) ಆನುದೇವಾ ಇಂಬಿನಲಿ ಇದ್ದೇನೆ - ಶ್ರೀ ರಂಜಾನ್ ದರ್ಗಾ.
೩) ಬಸವಣ್ಣ ಲಿಂಗಿ ಬ್ರಾಹ್ಮಣ -ಡಾ.ಎಂ.ಎಂ. ಕಲಬುರ್ಗಿ.
೪) ಬಸವಣ್ಣನವರ ವಂಶದ ನಿಜ ಚಿತ್ರ -ಡಾ.ಎಂ.ಚಿದಾನಂದಮೂರ್ತಿ.
೫) ಮೂಲ ಆಕರಗಳ ಕೊರತೆಗಳು -ಪ್ರೊ. ಜಿ.ಎಸ್.ಸಿದ್ಧಲಿಂಗಯ್ಯ.
೬) ಶಾಸನಗಳಲ್ಲಿ ಬಸವಣ್ಣನವರ ಕಾಲ ಮತ್ತು ಇತಿವೃತ್ತ : ಸಮೀಕ್ಷೆ -ಡಾ.ಸಿ.ನಾಗಭೂಷಣ.
೭) ಬಸವೇಶ್ವರರ ಮಾತಾಪಿತೃಗಳು ಮತ್ತು ಹುಟ್ಟಿದ ಕಾಲದ ಉಲ್ಲೇಖಗಳು -ಡಾ.ಬಿ.ನಂಜುಂಡಸ್ವಾಮಿ.
೮) ನಗುತ್ತಲೇ ಇರಿದಿದ್ದಾರೆ ! - ಡಾ.ಚೆನ್ನಬಸವಪ್ಪ , ಬೆಟ್ಟದೂರು.
೯) ವಚನ ತರಂಗ -ಪ್ರೊ. ಆರ್.ರಾಚಪ್ಪ .
೧೦) ಅಗ್ಗದ ಪ್ರಚಾರಕ್ಕಾಗಿ ಬರೆದ ಅಲ್ಲದ ಕೃತಿ : 'ಆನುದೇವಾ ಹೊರಗಣವನು...'
- ಡಾ.ಹೆಚ್.ಚಂದ್ರಶೇಖರ್

೧೩. ರುದ್ರಯ್ಯ ಜೆ.ಹೆಚ್.ಎಂ. ; ಆತ ದೇವಾ ಒಳಗಣವನು..., ಬಸವಣ್ಣನ ಜಾತಿ ಮೂಲದ ವಿಚಾರ -ವಿಮರ್ಶೆ ಚೌಶ್ ಕಾಂಪ್ಲೆಕ್ಸ್, ಬಿ.ಬಿ.ರೋಡ್, ಶಹಾಪುರ, ಗುಲಬರ್ಗಾ, ಪ್ರಥಮ ಮುದ್ರಣ ೨೦೦೭.

೧೪. ತಾರನಾಥ ಎನ್.ಎಸ್. (ಸಂಪಾದಕರು ) : ಶತಮಾನದ ಸಂಶೋಧನೆ , ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ಪ್ರಥಮ ಮುದ್ರಣ ೨೦೦೧.
೧) ಶಾಸನಗಳಲ್ಲಿ ಶಿವಶರಣರು - ಎಂ.ಎಂ.ಕಲಬುರ್ಗಿ.
೨) ವಚನಕಾರರ ದೃಷ್ಟಿಯಲ್ಲಿ ವರ್ಣ, ಜಾತಿ, ಜಾತಿಸಮಾನತೆ, ಮತಾಂತರ -ಡಾ.ಎಂ.ಚಿದಾನಂದಮೂರ್ತಿ
೩) ಶಿವಶರಣರ ಸ್ಥಾನಗಳು, ಬ್ರಾಹ್ಮಣರು, ಕಸುಬುದಾರರು, ಅಸ್ಪೃಶ್ಯರು, ಜೈನರು -ಫ.ಗು.ಹಳಕಟ್ಟಿ .
೪) ಬಸವಣ್ಣನವರ ಷಟ್‌ಸ್ಥಲ ವಚನಗಳ ಸಂಪಾದನೆ - ಶಿ.ಶಿ.ಬಸವನಾಳ.
೫) ಹರಳಯ್ಯ ಕಾಲ್ಪನಿಕ ವ್ಯಕ್ತಿಯೇ ? - ಅರವಿಂದ ಮಾಲಗತ್ತಿ.

---

## ಪರಾಮರ್ಶನ ಗ್ರಂಥಗಳು :


೧. ಅಮರೇಶ ನುಗಡೋಣಿ ಸಂ : 'ಬಸವಣ್ಣನ ವಚನಗಳು : ಸಾಂಸ್ಕೃತಿಕ ಮುಖಾಮುಖಿ', ಕ.ವಿ.ವಿ. ಹಂಪಿ, ಪ್ರಸಾರಾಂಗ, ೨೦೦೪.

೨. ಅನ್ನದಾನಯ್ಯ ಪುರಾಣಿಕ : 'ಷಟ್‌ಸ್ಥಲ ಬ್ರಹ್ಮಿ ಚೆನ್ನಬಸವಣ್ಣ ', ಬಸವ ಸಮಿತಿ ಬೆಂಗಳೂರು, ದ್ವಿತೀಯ ಆವೃತ್ತಿ : ೧೯೯೯.

೩. ಉತ್ತಂಗಿ. ಚ : 'ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ', ಪ್ರಕಾಶಕರು ಶ್ರೀ ಚ.ಉತ್ತಂಗಿ, ಮಿಷನ್ ಕಾಂಪೌಂಡ್, ಧಾರವಾಡ, ಎರಡನೆ ಮುದ್ರಣ : ೧೯೯೨.

೪. ಗರಣಿಯ ಬಸವಲಿಂಗ ವಿರಚಿತ : 'ಬಸವೇಶ್ವರನ ಕಾವ್ಯ ', ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ೧೯೮೨.

೫. ಗುಂಜಾಳ ಎಸ್.ಆರ್. : ಬಸವ ಸಾಹಿತ್ಯ ದರ್ಪಣ ಭಾಗ -೧, ಬಸವ ಸಮಿತಿ, ಬೆಂಗಳೂರು ೧೯೬೭.

೬. ಗೌರಿಲಂಕೇಶ್ (ಸಂಗ್ರಹ ) : 'ಆವರಣ' ಎಂಬ ವಿ -ಕೃತಿ, ವಿಮರ್ಶಾ ಸಂಕಲನ, ಲಂಕೇಶ್ ಪ್ರಕಾಶನ, ಬಸವನಗುಡಿ ಬೆಂಗಳೂರು, ಪ್ರಥಮ ಮುದ್ರಣ, ೨೦೦೭.

೭. ಚಂದ್ರಯ್ಯ ಡಾ.ಬಿ.ನಂ. (ಸಂ.) : ಗುರು ಚನ್ನಬಸವರಾಜನ ಶಿಷ್ಯ ವಿರಚಿತ 'ಬಸವ ಪವಾಡ ', ಶರಣ ಪ್ರಕಾಶನ, ಮೈಸೂರು, ೧೯೬೭.

೮. ಚಿದಾನಂದ ಮೂರ್ತಿ : 'ಬಸವಣ್ಣನವರು', 'ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಹೊಸದೆಹಲಿ, ೧೯೭೨.

೯. ತಾರಾನಾಥ್ ಎನ್.ಎಸ್. (ಸಂ.) : 'ಶತಮಾನದ ಸಂಶೋಧನೆ ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪ್ರಥಮ ಮುದ್ರಣ, ೨೦೦೧.

೧೦. ಡಾ. ತಿಪ್ಪೇರುದ್ರಸ್ವಾಮಿ ಎಚ್. : 'ಶರಣರ ಅನುಭಾವ ಸಾಹಿತ್ಯ', ಡಿ.ವಿ.ಕೆ.ಮೂರ್ತಿ :ಕಾವ್ಯಾಯಲಯ ಪ್ರಕಾಶನ, ಮೈಸೂರು ಮೂರನೆಯ ಮುದ್ರಣ , ೧೯೮೧.

೧೧. ದೇವೀರಪ್ಪ ಎಚ್., (ಸಂ.) : ಸಿಂಗಿರಾಜ ಕವಿಕೃತ ''ಬಸವರಾಜ್ ಚಾರಿತ್ರ '', ಅಥವಾ ಸಿಂಗಿರಾಜ ಪುರಾಣ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ದ್ವಿತೀಯ ಮುದ್ರಣ, ೧೯೭೦.

೧೨. ದೇವೀರಪ್ಪ ಲಿ॥ ಎಚ್.(ಸಂ.) : ಹಂಪೆಯ ಹರಿಹರ ವಿರಚಿತ 'ಬಸವರಾಜ ದೇವರ ರಗಳೆ ', ಬಸವ ಸಮಿತಿ, ಬೆಂಗಳೂರು, ತೃತೀಯ ಮುದ್ರಣ, ೨೦೦೩.

೧೩.. ನರಸಿಂಹ ಕೆದ್ಲಾಯ ಕೆ. : 'ಕಲ್ಯಾಣದ ಕಳಚುರ್ಯರು ', ಐಬಿಹೆಚ್ ಪ್ರಕಾಶನ, ಬೆಂಗಳೂರು, ಮೊದಲನೆ ಮುದ್ರಣ, ೧೯೭೩;

೧೪. ಡಾ. ನಾರಾಯಣ ಪಿ.ವಿ. (ಸಂ.) ವಿ.ಎಂ. ಪ್ರೊ. ಇನಾಂದಾರ್, ಡಾ. ಶಂಕರ ಮೊಕಾಶಿ ಪುಣೆಕಾರ : 'ಬಸವೇಶ್ವರ ', ಐಬಿಹೆಚ್ ಪ್ರಕಾಶನ, ಬೆಂಗಳೂರು, ಮೊದಲ ಮುದ್ರಣ ೧೯೮೮.

೧೫. ಡಾ. ನಾರಾಯಣ ಪಿ.ವಿ. : 'ವಚನ ಪರಿಸರ ', ನೇತ್ರಾ ಮುದ್ರಣಾಲಯ, ಬೆಂಗಳೂರು ಮೊದಲ ಮುದ್ರಣ, ೧೯೯೪.

೧೬. ಡಾ. ಪಿ.ವಿ. ನಾರಾಯಣ : (ಕನ್ನಡ ಅನುವಾದ) ; ಪಾಲ್ಕುರಿಕೆ ಸೋಮನಾಥನ 'ಬಸವ ಪುರಾಣ' (ತೆಲುಗು), ತರಳಬಾಳು ಪ್ರಕಾಶನ, ಅಣ್ಣನ ಬಳಗ, ಸಿರಿಗೆರೆ, ೧೯೮೨.

೧೭. ಬಸವರಾಜು ಎಲ್. (ಸಂ.) : 'ಬಸವಣ್ಣನವರ ವಚನಗಳು', ೧೯೯೦.

೧೮. ಬಸಪ್ಪ ಪಂಡಿತ ಎಸ್. (ಸಂ.) : ಲಕ್ಕಣ್ಣ ದಂಡೇಶ ವಿರಚಿತ 'ಶಿವತತ್ವ ಚಿಂತಾಮಣಿ ', ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು, ೧೯೯೦.

೧೯. ಬಸವರಾಜ ಸಬರದ : 'ಮಾದಾರ ಚೆನ್ನಯ್ಯ' ಶರಣ ಪರಂಪರೆ ಪುಸ್ತಕ ಮಾಲೆ -೧, ಬಸವ ಸಮಿತಿ, ಬೆಂಗಳೂರು, ಮೊದಲ ಮುದ್ರಣ, ೨೦೦೫.

೨೦. ಭೂಸನೂರ ಪ್ರೊ. ಸಂ.ಶಿ. (ಸಂ.) : ಸಿದ್ದನಂಜೇಶ ವಿರಚಿತ 'ಗುರುರಾಜ ಚಾರಿತ್ರ ' ಪ್ರಕಾಶಕರು : ಶ್ರೀ ಮ.ನಿ.ಪ್ರ. ಮೃತ್ಯುಂಜಯ ಸ್ವಾಮಿಗಳು, ಮುರುಘಾಮಠ, ಧಾರವಾಡ, ೧೯೫೦.

೨೧. ಮಲ್ಲಿಕಾರ್ಜುನ ಶಿ.ಲಠ್ಠೆ (ಸಂ.) : 'ಬಸವ ವಿಜಯ (ದೊಡ್ಡಾಟ)' ಬಸವ ಸಮಿತಿ, ಬೆಂಗಳೂರು, ಮೊದಲ ಮುದ್ರಣ , ೧೯೮೯.

೨೨. ಶ್ರೀ ಮಗ್ಗೆಯ ಮಾಯಿದೇವ ಪ್ರಭು ವಿರಚಿತ ''ಶಿವಾಧವ ಶಿವಾವಲ್ಲಭ ಮಹದೈಪುರೀಶ್ವರ '' - ಶತಕತ್ರಯವು ವಿರಕ್ತ ತೊಂಟದಾರ್ಯ ವಿರಚಿತ ಕನಾಟಕ ಟೀಕೆಯೊಡನೆ 'ಮೈಸೂರು ಸ್ಟಾರ್ ಆಫೀಸಿನಿಂದ ಪ್ರಕಟ, ೧೯೨೫.

೨೩. ಮಾತೆ ಮಹಾದೇವಿ : ಲಿಂಗಾಯಿತ ಧರ್ಮ ಕೈಪಿಡಿ, ಸಾಯಿಧಾನ ಸುಗ್ರಂಥ ಮಾಲೆ, ಬಸವ ಮಂಟಪ, ಬೆಂಗಳೂರು, ೨ನೇ ಮುದ್ರಣ, ೧೯೯೫.

೨೪. ಡಾ.ಕೆ.ಆರ್.ರತ್ನಮ್ಮ : 'ವಚನ ಸಾಹಿತ್ಯದ ಬೆಳಕಿನಲ್ಲಿ ' ಈಶ್ವರಿ ಪ್ರಕಾಶನ, ಮೈಸೂರು ಪ್ರಥಮ ಮುದ್ರಣ, ೨೦೦೬.

೨೫. ಲಿಂಗಣ್ಣಯ್ಯ ಓ.ಎನ್. : 'ಬಸವಣ್ಣ', ಎಂ.ಎಸ್. ಚಿಂತಾಮಣಿ, ಬಿ.ಎಸ್.ಸಿ., ಈಸ್ಟರ್ನ್ ಪ್ರೆಸ್, ಬೆಂಗಳೂರು, ಮೊದಲ ಮುದ್ರಣ, ೧೯೫೬.

೨೬. ವಿವಿಧ ಲೇಖಕರು : 'ವಚನ ಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ ' ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಮೊದಲ ಮುದ್ರಣ, ೧೯೯೩.

೨೭. ವೀರಣ್ಣ ರಾಜೂರ (ಸಂ.) : ಶಿವ ಶರಣೆಯರ ವಚನ ಸಂಪುಟ , ೨೦೦೧.

೨೮. ಶ್ರೀ ಶಾಸ್ತ್ರಿ ಜಿ.ವಿ. : 'ಬಸವಣ್ಣನವರ ವಚನಗಳು', ಪಾರು ಪ್ರಕಾಶನ, ಗದಗ, ಎರಡನೇ ಮುದ್ರಣ.

೨೯. ಶ್ರೀನಿವಾಸ : ಚಿಕವೀರ ರಾಜೇಂದ್ರ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್ (ರಿ., )ಬೆಂಗಳೂರು, ಐದನೆಯ ಮುದ್ರಣ, ೧೯೯೪.

೩೦. ಶಿವಮೂರ್ತಿ ಶಾಸ್ತ್ರಿ ಬಿ. (ಸಂ.) : ಶ್ರೀ ಬಸವೋದಾಹರಣಮ್ ' ಬಸವ ಸಮಿತಿ, ಬೆಂಗಳೂರು, ತೃತೀಯ ಮುದ್ರಣ, ೨೦೦೬.

೩೧. ಸೋಮಶೇಖರ ಹೆಚ್. (ಸಂ.) : 'ವಿಶ್ವ ವಚನ ದರ್ಶನ, ಪ್ರಥಮ ವಿಶ್ವ ಕನ್ನಡ ವಚನ ಸಾಹಿತ್ಯ, ಸಾಂಸ್ಕೃತಿಕ ಸಮ್ಮೇಳನ, ೨೦೦೮, ಮುಂಬೈ.

೩೨. ಸಿದ್ಧಿ ಗಂಗಪ್ಪ ಹೆಚ್.ಎಸ್. : 'ಬಸವಣ್ಣನ ನೆಲೆಗಳು ', ಬಸವತತ್ವ ಪ್ರಚಾರ ಹಾಗೂ ಸಂಶೋಧನಾ ಕೇಂದ್ರ ಪ್ರಕಾಶನ, ಬೆಂಗಳೂರು ಪ್ರಥಮ ಮುದ್ರಣ, ೨೦೦೭.

೩೩. ಡಾ. ಆರ್.ಸಿ.ಹಿರೇಮಠ (ಸಂ.) : ಭೀಮಕವಿ ವಿರಚಿತ 'ಬಸವ ಪುರಾಣ', ಪ್ರಕಾಶಕರು : ಶ್ರೀ ನಿ.ಪ್ರ. ಮಹಾಂತ ಸ್ವಾಮಿಗಳು, ಶ್ರೀ ಮುರುಘಾಮಠ, ಧಾರವಾಡ, ೧೯೭೧.

---

